# ದೂರದರ್ಶನದಲ್ಲಿ ಸುದ್ದಿ ಭಾಷಾ ಬದಲಾವಣೆ : ಒಂದು ಅಧ್ಯಯನ

(ಕನ್ನಡ ಖಾಸಗಿ ಸುದ್ದಿ ವಾಹಿನಿಗಳನ್ನು ಅನುಲಕ್ಷಿಸಿ)

ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ
ಸಂಪ್ರಬಂಧ

2011–2012


ಸಂಶೋಧನಾ ವಿದ್ಯಾರ್ಥಿ
ರಂಗಸ್ವಾಮಿ ಹೆಚ್.ಟಿ
ನೋಂದಣಿ ಸಂಖ್ಯೆ : ಕೆ.ವಿ.ಎಂ.ಬಿ.ಕೆ.ಎಸ್ – 00540

ಮಾರ್ಗದರ್ಶಕರು

ಡಾ.ಬಿ.ಎಸ್. ಸುಬ್ಬರಾವ್

ಪ್ರಾಧ್ಯಾಪಕರು

ನ್ಯಾಷನಲ್ ಪದವಿ ಕಾಲೇಜು (ಸ್ವಾಯತ್ತ)

ಬಸವನಗುಡಿ ಬೆಂಗಳೂರು–04





ಅಧ್ಯಯನ ಸಂಸ್ಥೆ
(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)
ಕಾವ್ಯಮಂಡಲ
ನಂ.13/85,ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು – 560004.

# ದೂರದರ್ಶನದಲ್ಲಿ ಸುದ್ದಿ ಭಾಷಾ ಬದಲಾವಣೆ: ಒಂದು ಅಧ್ಯಯನ
## (ಕನ್ನಡ ಖಾಸಗಿ ಸುದ್ದಿ ವಾಹಿನಿಗಳನ್ನು ಅನುಲಕ್ಷಿಸಿ)

ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ
೨೦೧೨

ಸಂಶೋಧನಾ ವಿದ್ಯಾರ್ಥಿ
**ರಂಗಸ್ವಾಮಿ ಹೆಚ್.ಟಿ.**
**ರಿಜಿಸ್ಟರ್ ನಂ. ಕೆವಿಎಂಬಿಕೆಎಸ್ – ೦೦೫೪೦**

ಮಾರ್ಗದರ್ಶಕರು
**ಡಾ॥ ಬಿ.ಎಸ್. ಸುಬ್ಬರಾವ್**
ಪ್ರಾಧ್ಯಾಪಕರು
ನ್ಯಾಷನಲ್ ಪದವಿ ಕಾಲೇಜು (ಸ್ವಾಯತ್ತ),
ಬಸವನಗುಡಿ, ಬೆಂಗಳೂರು – ೦೪

**ಅಧ್ಯಯನ ಸಂಸ್ಥೆ**

ಕಾವ್ಯಮಂಡಲ
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ,
ಬೆಂಗಳೂರು–೫೬೦ ೦೦೪.

# ಪ್ರಮಾಣ ಪತ್ರ

"ದೂರದರ್ಶನದಲ್ಲಿ ಸುದ್ದಿ ಭಾಷೆಯ ಬದಲಾವಣೆ: ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ॥ ಬಿ.ಎಸ್. ಸುಬ್ಬರಾವ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧದ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ನಾನು ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೆಂಗಳೂರು.

ದಿನಾಂಕ : ೨೯/೬/೨೦೧೨

ರಂಗಸ್ವಾಮಿ ಹೆಚ್.ಟಿ.

ಸಂಶೋಧನಾ ವಿದ್ಯಾರ್ಥಿ

ರಿಜಿಸ್ಟರ್ ನಂ. ಕೆವಿಎಂಬಿಕೆಎಸ್ – ೦೦೫೪೦

# ದೃಢೀಕರಣ ಪತ್ರ

ರಂಗಸ್ವಾಮಿ ಹೆಚ್.ಟಿ. ಇವರು "ದೂರದರ್ಶನದಲ್ಲಿ ಸುದ್ದಿ ಭಾಷೆಯ ಬದಲಾವಣೆಯ; ಒಂದು ಅಧ್ಯಯನ" ಎಂಬ ವಿಷಯ ಕುರಿತ ಸಂಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ಸ್ಥಳ : ಬೆಂಗಳೂರು

ದಿನಾಂಕ : 29/6/2012

ಡಾ॥ ಬಿ.ಎಸ್. ಸುಬ್ಬರಾವ್

ಮಾರ್ಗದರ್ಶಕರು

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ

ನ್ಯಾಷನಲ್ ಕಾಲೇಜು, ಬೆಂಗಳೂರು

# ಪರಿವಿಡಿ

## ಪೀಠಿಕೆ

ಭಾಷೆ ಎನ್ನುವುದು ಸಂವಹನಕ್ಕೆ ಮಾತ್ರವಲ್ಲದೆ, ಆಯಾ ಪ್ರದೇಶದ ಸಾಂಸ್ಕೃತಿಕ ಇತಿಹಾಸ ಸಾಮಾಜಿಕ ಜೀವನದ ಅರಿವು ಪಡೆಯಲು ಉತ್ತಮ ಮೂಲವೂ ಆಗಿದೆ. ಇದಕ್ಕೂ ಹೆಚ್ಚಾಗಿ ಭಾಷೆಯು ಒಂದು ಜನಾಂಗವನ್ನು ಭಾವನಾತ್ಮಕವಾಗಿ ಬೆಸೆಯುವ ಮಂತ್ರಶಕ್ತಿ. ಹಾಗೆಯೇ ಭಾಷೆಯು ಒಂದು ಸಂವಹನ ಕ್ರಿಯೆಯು ಹೌದು. ಯಾವ ಭಾಷೆಯು ಜನ ಸಾಮಾನ್ಯರ ಮತ್ತು ಸಮೂಹ ಮಾಧ್ಯಮಗಳ ಜೊತೆಯಲ್ಲಿ ಸಕ್ರಿಯ ಸಂಬಂಧ ಹೊಂದಿರುತ್ತದೊ ಅಲ್ಲಿ ಬೆಳೆಯಬಲ್ಲದು.

ಭಾಷೆ ಕೇವಲ ಪುಸ್ತಕ ಭಾಷೆಯಾಗಿದ್ದರೆ ಸಾಲದು. ಅದು ಸಮುದಾಯದ ಜನರ ನಾಲಿಗೆಯಲ್ಲಿ ಮತ್ತು ಸಮೂಹ ಮಾಧ್ಯಮಗಳಲ್ಲಿ ಪ್ರತಿನಿತ್ಯ ನಲಿದಾಡಬೇಕು. ಭಾಷೆಯು ನಿಂತನೀರಾಗದೆ ತಲೆಮಾರಿನಿಂದ, ತಲೆಮಾರಿಗೆ, ಪೀಳಿಗೆಯಿಂದ ಪೀಳಿಗೆಗೆ, ಭಾಷೆಯಿಂದ – ಭಾಷೆಗೆ [ಮೌಖಿಕವಾಗಿ ಮತ್ತು ಲಿಪಿಕವಾಗಿ ಭಾಷಾಂತರದ ಮೂಲಕ] ಹಬ್ಬಬೇಕು. ಅಂದಾಗ ಮಾತ್ರ ಭಾಷೆಯು ಬೆಳೆಯಲು ಸಾಧ್ಯವಾಗುತ್ತದೆ. ಈ ಮೂಲಕ ಕನ್ನಡ ಭಾಷೆಯು ಮೌಖಿಕವಾಗಿ ಲಿಖಿಕವಾಗಿ ಮಾತನಾಡುವ, ವ್ಯವಹರಿಸುವ, ಆಡಳಿತ ಭಾಷೆಯಾಗಿ ಮತ್ತು ಸಾಹಿತ್ಯ ಭಾಷೆಯಾಗಿ ಮತ್ತು ಎಲ್ಲಾ ವಿಧಗಳಲ್ಲಿಯೂ ತನ್ನತನವನ್ನು ಉಳಿಸಿಕೊಂಡು ಬಂದಿದೆ.

ಭಾಷೆ ಬೆಳೆಯುವುದು ಎಂದರೆ, ತನ್ನಲ್ಲಿರುವ ಶಬ್ಧ ಭಂಡಾರವನ್ನು ಬಳಸುತ್ತಲೇ ಅಗತ್ಯಕ್ಕೆ ತಕ್ಕಂತೆ ಹೊಸ ಹೊಸ ಭಾವನೆಗಳನ್ನು, ವಿಚಾರಗಳನ್ನು, ವಸ್ತುಗಳನ್ನು, ಹೆಸರಿಸಲು ಹೊಸ ಹೊಸ ಪದಗಳ ಸೃಷ್ಟಿ ಮಾಡುವುದು ಎಂದೇ ಹೇಳಬಹುದು. ಇದಲ್ಲದೆ ಭಾಷಾಂತರದ ಮೂಲಕ ಭಾಷೆಯು ಬೆಳವಣಿಗೆಯು ಆಗುತ್ತದೆ, ಎರಡು ಸಾವಿರ ವರ್ಷಗಳಷ್ಟು ಇತಿಹಾಸ ಹೊಂದಿರುವ ಕನ್ನಡದ ಹರಿವು, ವಿಸ್ತಾರ ಬಹಳ ದೊಡ್ಡದು. ಕನ್ನಡ ಕೇವಲ ಪಂಡಿತರ ಇಲ್ಲವೇ ಪುಸ್ತಕದ ಭಾಷೆಯಾಗಿ ಉಳಿದಿಲ್ಲ. ಅದು ಹಾಗೆಯೇ ಉಳಿದಿದ್ದರೆ ಇಷ್ಟರ ಮಟ್ಟಿಗೆ ಬೆಳೆಯುತ್ತಿರಲಿಲ್ಲ. ಒಂದು ಪ್ರದೇಶದ ಸಂಸ್ಕೃತಿಯನ್ನು ಉನ್ನತ ಸ್ಥಿತಿಗೆ ಕೊಂಡೊಯ್ಯಲು ಸಾಧ್ಯವಾಗುತ್ತಿರಲಿಲ್ಲ. ಈ ಭಾಷೆ ಒಂದು ಪ್ರದೇಶದ, ರಾಜ್ಯದ, ದೇಶದ, ಜನರ ಭಾವನಾತ್ಮಾಕವಾಗಿ ಬೆಸುಗೆಯಾಗುತ್ತಿರಲಿಲ್ಲ.

ಕನ್ನಡಕ್ಕೆ ತೀರಾ ಸಾಮಾಜಿಕ ತಳಮಟ್ಟದಲ್ಲಿ ಗಟ್ಟಿಯಾದ ಬುನಾದಿ ಇದೆ. ಕನ್ನಡ ಭಾಷೆ ಸಾಹಿತ್ಯದ ಭಾಷೆಯಾಗಿಯೂ ಸಮೃದ್ಧವಾಗಿದೆ ಅನ್ನುವುದಕ್ಕೆ ಕನ್ನಡ ಸಾಹಿತ್ಯಕ್ಕೆ ಎಂಟು ಜ್ಞಾನಪೀಠ ಪ್ರಶಸ್ತಿಗಳು ಬಂದಿರುವುದು ಸಾಕ್ಷಿಯಾಗಿದೆ.

ಸಾಹಿತ್ಯೇತರ ಕ್ಷೇತ್ರಗಳಾದ ವಿಜ್ಞಾನ, ತಂತ್ರಜ್ಞಾನ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಕ್ರೀಡೆ, ಸಮಾಜಶಾಸ್ತ್ರ, ಮಹಿಳಾ ಅಧ್ಯಯನ, ಕೃಷಿ ಅಧ್ಯಯನ ಮುಂತಾದ ಜ್ಞಾನ ಕ್ಷೇತ್ರಗಳಲ್ಲಿನ ಪರಿಣಿತರು ಕನ್ನಡದಲ್ಲಿ ಆಯಾ ಶಾಖೆಗಳ ಅರಿವನ್ನು ಕನ್ನಡದಲ್ಲಿ ರಚಿಸಿದಾಗ ಭಾಷೆ ಇನ್ನಷ್ಟು ಶಕ್ತಿಯುತ್ತವಾಗುತ್ತದೆ. ಅಲ್ಲದೆ ಕನ್ನಡದ ಭಾಷೆಯು ಎಲ್ಲಾ ಕ್ಷೇತ್ರಗಳಿಗೆ ಬಳಸುವುದರಿಂದ ಕನ್ನಡ ಶಬ್ದ ಭಂಡಾರ ಹೊಸಪದಗಳ ಸೇರ್ಪಡೆಯಾಗಿ ಭಾಷೆಯು ಬೆಳೆಯಲು ಸಹಕಾರಿಯಾಗುತ್ತದೆ.

ಭಾಷಾ ಪ್ರಯೋಗದಲ್ಲಿ ಅದರ ಆಂತರಿಕ ಸಂಬಂಧವನ್ನ ಅರಿಯುವುದು ಅಗತ್ಯ. ವಿವಿಧ ಭಾಷೆಗಳು ಹಲವು ಸಾಮಾನ್ಯ ಗುಣಾಂಶಗಳನ್ನು ಹೊಂದಿದ್ದರೂ ಎಲ್ಲವು ಒಂದೇ ಮೂಲದಿಂದ ರೂಪಗೊಂಡಂತವುಗಳಲ್ಲ. ಇದರಿಂದಲೇ ಪ್ರತಿಯೊಂದು ಭಾಷೆಯು ತನ್ನ ಮೂಲ ಸ್ವರೂಪದ ಜಾಯಮಾನವನ್ನು ಸಮರ್ಥಿಸುತ್ತಲೇ ವಿಕಾಸಗೊಳ್ಳುತ್ತದೆ. ಭಾಷೆ ಇರುವುದೇ ಸಂವಹನೆಗಾಗಿ, ಒಂದು ಭಾಷೆಯು ಸ್ಪಷ್ಟ ಅಭಿವ್ಯಕ್ತಿಯನ್ನು ತೆರೆದಿಡಬೇಕಾದರೆ ಆ ಭಾಷೆಗೆ ರೀತಿ–ರಿವಾಜುಗಳ ಚೌಕಟ್ಟು ಇರಬಾರದು. ಉಲ್ಲಂಘನೆ ಮಾಡಲಾರದಂತಹ ಶಿಸ್ತಿನ ನಿಯಮಗಳು ವ್ಯಾಕರಣ ನಿಬಂಧಗಳು ಅನ್ಯ ಭಾಷೆಗಳಿಂದ ದೂರ ಉಳಿಯುವ ಮಡಿವಂತಿಕೆ ಭಾಷೆಯನ್ನು ಬೆಳೆಸಲಾರವು. ಆದ್ದರಿಂದಲೇ ಸಮೂಹ ಮಾಧ್ಯಮಗಳಲ್ಲಿ ಭಾಷೆಯು ಮಡಿವಂತಿಕೆಯನ್ನು ಕಳೆದುಕೊಂಡಿದೆ. ಈ ಮಡಿವಂತಿಕೆಯನ್ನು ಕಳೆದುಕೊಳ್ಳುವ ಯಾವುದೇ ಭಾಷೆಯು ಬೆಳೆಯುತ್ತದೆ.

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಮಾನವ ಮೊದಲು ಉಪಯೋಗಿಸಿದ ಸಂಕೇತಗಳು, ದೇಹ ಚಲನೆಗಳು ಎಂದರೆ, ತಲೆಯನ್ನು ಒಂದು ರೀತಿಯಲ್ಲಿ ತಿರುಗಿಸಿದಾಗ ಒಪ್ಪಿಗೆ, ಇನ್ನೊಂದು ರೀತಿಯಲ್ಲಿ ಅಲ್ಲಾಡಿಸಿದಾಗ ಅಸಮ್ಮತಿ, ಕೈಬೀಸಿ ಕರೆಯುವುದು, ಹೋಗೆಂದು ದಬ್ಬುವುದು, ಕಣ್ಣು ಮಿಟುಕಿಸುವುದು, ಮುಖವನ್ನು ವಿಕಾರ ಮಾಡುವುದು, ಅಳುವುದು ನಗುವುದು ಈಗಲೂ ಚಾಲ್ತಿಯಲ್ಲಿರುವ ಕೆಲವು ಸಂಕೇತಗಳು. ಆನಂತರದಲ್ಲಿ ಮಾನವನು ತನ್ನ ಧ್ವನಿಯಿಂದ ವಸ್ತುಗಳನ್ನು ಸೂಚಿಸಲು ಸಾಧ್ಯವಾದುದು ಮಾನವ ಸಂವಹನದ ಇನ್ನೊಂದು ಮೈಲಿಗಲ್ಲು. ಧ್ವನಿ ಸಂಕೇತಗಳು ಪದಗಳಾದವು. ಮೊದಲು ಹಸು, ಮೀನುಗಳಂತಹ ಪ್ರಾಣಿಗಳು ಮತ್ತು ಭೌತಿಕ ವಸ್ತುಗಳಿಗೆ ಮಾತ್ರ ಇಂತಹ ಪದ ಸಂಕೇತಗಳು ಬಂದಿರಬಹುದು. ಮುಂದೆ ಒಳ್ಳೆಯದು, ಕೆಟ್ಟದ್ದು ಎಂಬಂತಹ ಗುಣಗಳು. ಬಾ, ಹೋಗು, ನಿಲ್ಲು ಅಂತಹ ಕ್ರಿಯೆಗಳನ್ನು ಪದಗಳ ಮೂಲಕ ತಿಳಿಸಲು ಸಾಧ್ಯವಾಗಿರಬೇಕು.

ಭಾಷೆಗಳು ಬೆಳೆದು ಆಡುವ ಭಾಷೆ ಬರೆವಣಿಗೆಯನ್ನು ಪಡೆದುದು ಸಂವಹನದ ಪ್ರಗತಿಯಲ್ಲಿನ ಮುಖ್ಯ ತಿರುವು. ಆಡುಮಾತು ಕ್ಷಣಿಕ, ಆದರೆ ಬರವಣಿಗೆಯು ಸಂವಹನಕ್ಕೆ ಒಂದು ರೀತಿಯ ಶಾಶ್ವತತೆಯನ್ನು ತಂದುಕೊಟ್ಟಿತು. ಜೊತೆಗೆ ಆಡಿದ ಮಾತಿಗಿಂತ ಬರಹ ಹೆಚ್ಚು ಅಧಿಕೃತವಾಗಿ ನಂಬಲರ್ಹವಾದುದು ಎನಿಸಿತು. ಏಕೆಂದರೆ ಉಚ್ಚರಿಸಿದ ಮಾತುಗಳು ಬರಹದಲ್ಲಿ ದಾಖಲು ಆಗಿ, ಶಾಶ್ವತವಾಗಿ ಉಳಿಯುತ್ತದೆ. ಆದ್ದರಿಂದಲೇ ಬರಹಕ್ಕೆ 'ಅಕ್ಷರ' (ನಾಶವಿಲ್ಲದ್ದು) ಎನ್ನುವ ಹೆಸರು ಬಂದಿರುವುದು.

ಮನುಷ್ಯ ಆದಿಮ ಕಾಲದಿಂದಲೂ ಸಂಘಜೀವಿ, ಸಮಾಜ ಜೀವಿ ಈ ಸಂಘ ಜೀವನ ಅಥವಾ ಸಮುದಾಯ ಜೀವನದ ಮೊದಲ ಮೆಟ್ಟಿಲೆಂದರೆ ಸಂವಹನ. ಸಂಘಜೀವಿಗಳು ಪರಸ್ಪರ ಕಲೆತು ಮಾತುಕತೆ ಆರಂಭಿಸಿದ ದಿನಗಳಿಂದಲೇ ಸಂವಹನ ಶುರುವಾಯಿತು. ಮಾನವ ತನ್ನ ಆಸೆ ಆಕಾಂಕ್ಷೆಗಳನ್ನು ವ್ಯಕ್ತಪಡಿಸಬಲ್ಲ, ತನ್ನ ಜೀವನ ವಿಧಾನಗಳನ್ನು ಬದಲಾಯಿಸಿಕೊಳ್ಳಬಲ್ಲ. ಮಾನವ ಸಮಾಜವಿರುವುದೇ ಸಂವಹನದಿಂದ ಮನುಷ್ಯ ಸಂಬಂಧಗಳು ಗಟ್ಟಿಗೊಳ್ಳಲು ಸಂವಹನ ಪ್ರಮುಖ ಸಾಧನ. ಹಾಗೆಯೇ ಸಂವಹನ ಮತ್ತು ಭಾಷೆ ಮನುಷ್ಯನ ಸಾಧನೆ ಎನ್ನಬಹುದು. ಕಾಲಾನುಕಾಲದಿಂದ ವಿವಿಧ ಬಗೆಗಳಲ್ಲಿ, ಬೆಳೆದು ಬಂದಿರುವ ಸಂವಹನ, ಮಾಹಿತಿ ತಂತ್ರಜ್ಞಾನದ ಈ ಕ್ರಾಂತಿಕಾರಕ ದಿನಗಳಲ್ಲಿ ತುಂಬಾ ಚಾಲ್ತಿಯಲ್ಲಿರುವ ಪದವಾಗಿದೆ. ಇದು ಕೇವಲ ಒಂದು ಪದವಲ್ಲ, ಮಾನವ ಸರಪಳಿಯ ಪ್ರಕ್ರಿಯೆ. ಇಂದು ಸಂವಹನವು ಜ್ಞಾನ–ವಿಜ್ಞಾನ, ತಂತ್ರಜ್ಞಾನಗಳ ಲೋಕಕ್ಕೆ ಕೀಲಿಕೈ ಇದ್ದಂತೆ. ಪ್ರತೀ ಹೆಜ್ಜೆಯಲ್ಲೂ, ಸಂವಹನ ಹೊಸ ಅವಿಷ್ಕಾರಗಳಿಗೆ ಹರಿಕಾರ ಇದ್ದಂತೆ ಎನ್ನಬಹುದು.

ಸಂವಹನದ ಮೂಲಕ ಭಾಷೆಯು ಒಬ್ಬರ ಅಂತರಂಗದ ಸ್ಪಂದನಗಳನ್ನು ಮೊದ ಮೊದಲು ಅಸ್ಪಷ್ಟವಾಗಿ ಮತ್ತೊಬ್ಬರಿಗೆ ತಿಳಿಸುವ ಪ್ರಕ್ರಿಯೆಯಲ್ಲಿ. ಆಶ್ಚರ್ಯಕರವಾದ ಪ್ರಗತಿಯನ್ನು ಪಡೆಯಿತು. ತನ್ನ ಅಸಂಖ್ಯಾತ ಸೂಕ್ಷ್ಮ ಭಾವನೆಗಳಿಗೆ ತುಡಿತಗಳಿಗೆ ಭಾಷೆಯು ಕವಚವನ್ನು ಸಮರ್ಥವಾಗಿ ತೊಡಿಸುವ ಮೂಲಕ ಮತ್ತೊಬ್ಬರನ್ನು ತನ್ನ ಅಂತರಂಗದ ಸಹಚರಿಯಾಗಿ ಸಹಭಾಗಿಯಾಗಿ ಮಾಡಿಕೊಳ್ಳುವ ಪ್ರಯೋಗಶೀಲ ಹವಣಿಕೆಯಲ್ಲಿ ಸಂಕೇತ ರೂಪದ ಸ್ಥೂಲ ಸ್ವರೂಪದ ಕನ್ನಡ ಭಾಷೆ ಸೂಕ್ಷ್ಮಾತಿ ಸೂಕ್ಷ್ಮವೂ, ಸರ್ವವ್ಯಾಪಕವೂ ಪರಿಣಾಮಕಾರಿಯಾಗುತ್ತಾ ನಡೆಯಿತು.

ಕನ್ನಡ ಭಾಷೆಯು ಮನುಷ್ಯ ತನ್ನ ಅಂತರಂಗದ ಅಮೂರ್ತ ಭಾವನೆಗಳನ್ನು, ಆಲೋಚನೆಗಳನ್ನು ಮತ್ತೊಬ್ಬರಿಗೆ ಮುಟ್ಟಿಸುವ ಸುದೀರ್ಘ ಪ್ರಯೋಗಶೀಲ ಪ್ರಯತ್ನವಾಗಿ ಮೈದೋರಿತು. ಆರಂಭದಲ್ಲಿ ಕನ್ನಡ ಭಾಷೆ ಕೂಡ ಕಚ್ಚಾ ಸ್ವರೂಪದಲ್ಲಿದು, ನಮ್ಮ ಒಳಗೆಲ್ಲವನ್ನು ಪರಿಣಾಮಕಾರಿಯಾಗಿ ಹೊಂದಿತು. ಮನುಷ್ಯನ ಆದಿಯ ಹಂತದಿಂದ ಆಧುನಿಕ ಹಂತಕ್ಕೆ ತಲುಪುವವರೆಗೆ ತನ್ನ ಅಂತರಂಗಕ್ಕೂ ಮತ್ತು ಬಹಿರಂಗಕ್ಕೂ ಸಹಜವಾದ ಹೆದ್ದಾರಿಯನ್ನು ಸೃಷ್ಟಿಸುವ ನಿರಂತರ ಪ್ರಯತ್ನದಲ್ಲಿ ಸಂದರ್ಭ, ಸನ್ನಿವೇಶಗಳ ಅನಿವಾರ್ಯತೆಯ ಫಲವಾಗಿ ಹಾಗೂ ಅಂತಃ ಸ್ಫೂರ್ತಿಯಿಂದ ಚಿಂತಿಸುತ್ತ ಆ ಮೂಲಕ ಕ್ರಿಯಾ ರೂಪವಾಗಿ ಅವನ್ನು ಬಹಿರ್ಗತಗೊಳಿಸುತ್ತಾ ಹೋದಂತೆಲ್ಲ ಈ ಭಾಷಾ ವೃಕ್ಷ ತನ್ನ ಎಲ್ಲೆಯನ್ನು ಮೂಡಿಸುತ್ತಾ ಹೋಯಿತು. ಇಂತಹ ವಿಕಾಸಶೀಲ ಹವಣಿಕೆಯಲ್ಲಿ ಭಾಷೆ ನೂತನ ಹವಣಿಕೆಯಲ್ಲಿ, ಅವಿಷ್ಕಾರವನ್ನು ಧಾರಣೆ ಮಾಡುತ್ತಾ ಹೋದಂತೆ ಅವುಗಳನ್ನು ಪರಿಣಾಮಕಾರಿಯಾಗಿ ಮತ್ತು ವೇಗವಾಗಿ ಇನ್ನೊಂದು ಮನಸ್ಸಿಗೆ ಮುಟ್ಟಿಸುವ ಸತತ ಸಂಶೋಧನೆಯಲ್ಲಿ ಈ ಅಭಿವ್ಯಕ್ತಿಯ ಹೊಸ ಹೊಸ ಸಾಧನಗಳನ್ನು ಕಂಡರಿಸುತ್ತ ಹೋಯಿತು. ಹೀಗಾಗಿ ಸಾವಿರಾರು ವರ್ಷಗಳ ನಿರಂತರವಾದ ವ್ಯಕ್ತಿಗತ ಹಾಗೂ ಸಾಮೂಹಿಕ ಪ್ರಯೋಗ ಮತ್ತು ಪರಿಶ್ರಮಗಳು ಭಾಷೆಯ ಸಮರ್ಪಕ ರೂಪಿಕೆಯಲ್ಲಿ ಮಹತ್ವರವಾದ ಪಾತ್ರವನ್ನು ವಹಿಸುತ್ತಾ ಬಂದಿದೆ.

ಭಾಷೆಯೆಂದರೆ ಆಡುವ ಮಾತು, ಲಿಪಿ ಏನಿದ್ದರೂ ಅದನ್ನು ಹಿಡಿದಿಡುವ ಒಂದು ಸಾಧನ ಮಾತ್ರ. ಭಾಷೆಯ ಉಪಯೋಗಗಳು ಅನಂತ. ಭಾಷೆಯೆಂಬ ಬೆಳಕು, ಎರಡು ಸಹಸ್ರಮಾನಗಳ ಇತಿಹಾಸವಿರುವ ಕನ್ನಡ ಭಾಷೆ ಅನೇಕ ಅವಸ್ಥಾಂತರಗಳು ನಡುವೆಯೂ ಇಂದಿಗೂ ಸಶಕ್ತ , ಸಧೃಡ ಭಾಷೆಯಾಗಿಯೇ ಉಳಿದಿದೆ. ಹಾಗೆನ್ನುವುದಕ್ಕೆ ಇದು ಇಷ್ಟು ದೀರ್ಘಕಾಲ ಉಳಿದಿರುವುದೇ ಸಾಕ್ಷಿ. ಪೂರ್ವದ ಹಳಗನ್ನಡದಿಂದ, ಆಧುನಿಕ ಕನ್ನಡದವರೆಲ್ಲ ಜನ ಈ ಕನ್ನಡ ಭಾಷೆಯನ್ನು ಬಳಸಿದ್ದಾರೆ, ಬೆಳೆಸಿದ್ದಾರೆ. ಮಧ್ಯೆ ಅನೇಕ ದ್ರಾವಿಡೇತರ ಭಾರತೀಯ ಭಾಷೆಗಳ ವಿದೇಶಿ ಭಾಷೆಗಳ ನೆರಳು ಕನ್ನಡದ ಮೇಲೆ ಬಿದ್ದಿದೆ. ಆ ಮೂಲಕ ಕನ್ನಡ ಭಾಷೆಯ ಬೆಳವಣಿಗೆಗೆ ಮುಖ್ಯವಾಗಿ ಪದ ರಚನೆಗೆ, ವಾಕ್ಯ ರಚನೆಗೆ ಅವುಗಳ ಸಂಪರ್ಕ ಪೂರಕವಾಗಿದೆ ಎನ್ನಬಹುದು.

ಭಾಷೆಯು ಪ್ರಧಾನವಾಗಿ ಒಂದು ಸಂವಹನ ವ್ಯವಸ್ಥೆ ಆಗಿದೆ. ಸಂವಹನ ಎಂದರೆ ಮನುಷ್ಯನು ತನ್ನ ಭಾವನೆಗಳನ್ನು ತಲುಪಿಸುವುದು ಎಂದರ್ಥ ಸಮೂಹ ಸಂವಹನ ಮಾಧ್ಯಮ ಎಂದರೆ ಇದೊಂದು ಭೌತಿಕ ಸಾಧನವಲ್ಲ. ಮಾಧ್ಯಮ ಇದು ಇಡೀ ವ್ಯವಸ್ಥೆಯೇ ಆಗಿದೆ ಎನ್ನುವ ಅಂಶವನ್ನು ಗಮನಿಸಬೇಕು. ಇಡೀ ಸಮಾಜವನ್ನು ಮಾಧ್ಯಮಗಳು ಆವರಿಸಿದ್ದು, ಮಾಧ್ಯಮವನ್ನು ಬಿಟ್ಟು ಬದುಕಿಲ್ಲ ಎಂಬ ಪರಿಸ್ಥಿತಿಯಲ್ಲಿ ನಾವು ಇದ್ದೇವೆ.

ಇಂದಿನ ಯುಗವನ್ನು ಆಧುನಿಕ ಯುಗವೆಂದು ಕರೆಯುವಂತೆ ಸಮೂಹ ಮಾಧ್ಯಮದ ಯುಗವೆಂದು ಕರೆಯಲಾಗುತ್ತಿದೆ. ಸಮೂಹ ಮಾಧ್ಯಮ ಮನುಷ್ಯನ ರಕ್ತದಲ್ಲಿ ಬೆರೆತಿದೆ ಎನ್ನುವ ಪರಿಸ್ಥಿತಿ ಸೃಷ್ಟಿಯಾಗಿರುವುದನ್ನು ನಾವು ನೋಡಬಹುದಾಗಿದೆ. ಈ ಸಂದರ್ಭದಲ್ಲಿ ನಾವು ಸಮೂಹ ಮಾಧ್ಯಮಗಳು ಯಾವ ರೀತಿಯ ಸುದ್ದಿಗಳನ್ನು ಹೇಗೆ ಪ್ರಕಟಿಸಬೇಕು? ಸಮೂಹ ಮಾಧ್ಯಮದ ವೃತ್ತಿ ಯಾವುದು? ಎಂಬುದರ ಬಗ್ಗೆ ತಿಳಿಯುವುದು ಅವಶ್ಯಕ. ಭಾಷೆಯನ್ನು ಸುಲಭವಾಗಿಸುವ ಸಂದರವಾಗಿಸುವ ಕ್ರಿಯೆಯು ವ್ಯಾಪಕವಾಗಿ ಅವಿಷ್ಕಾರಗೊಂಡಿತು. ಸಮೂಹ ಮಾಧ್ಯಮಗಳು ಈ ಅವಿಷ್ಕಾರಗಳನ್ನು ಬಳಸಿಕೊಂಡು ಜನರಿಗೆ ತಂತ್ರಜ್ಞಾನದ ಲಾಭವನ್ನು ತಲುಪಿಸುತ್ತಿವೆ.

ಒಂದು ಸುದ್ದಿಯನ್ನು ಅಥವಾ ವಿಷಯವನ್ನು ಒಂದು ಕಡೆಯಿಂದ ಹಲವು ಕಡೆಗೆ ಒಬ್ಬರಿಂದ ಹಲವರಿಗೆ ಏಕಕಾಲದಲ್ಲಿ ವಿವಿಧ ರೀತಿಯ ವಾಕ್ಯದ ಭಾಷೆಯ ಮೂಲಕ ಸಮುದಾಯದ ಜನತೆಗೆ ಹತ್ತಿರವಾಗಿದೆ. ಸಮೂಹ ಮಾಧ್ಯಮವು ವಿದ್ಯಾವಂತರ, ಅವಿದ್ಯಾವಂತ, ಬಡವ, ಬಲ್ಲಿದ ಎಂಬ ಭೇದವಿಲ್ಲದೆ ಎಲ್ಲಾ ಸಾಮಾಜಿಕ ವರ್ಗಗಳ ಜನತೆಗೆ ಹತ್ತಿರವಾಗಿದೆ. ಮಾಧ್ಯಮಗಳಲ್ಲಿ ಭಾಷೆಯು ಏಕಕಾಲದಲ್ಲಿ ಸಾವಿರಾರು ಜನರಿಗೆ ತಲುಪುತ್ತದೆ. ಹಾಗೆಯೇ ಎಲ್ಲಾ ಸಮೂಹ ಮಾಧ್ಯಮಗಳಲ್ಲಿನ ವಿಷಯಗಳು ಬಹಳ ಜನರನ್ನು ಗಮನದಲ್ಲಿಟ್ಟುಕೊಂಡು ಪ್ರಸಾರವಾಗುತ್ತವೆ. ಉದಾಃ ಒಂದು ವಾರ್ತೆಯನ್ನು ಒಂದೇ ಸಮಯ / ವೇಳೆ ಲಕ್ಷಾಂತರ ಮಂದಿ ಕೇಳುತ್ತಾರೆ. ನ್ಯೂಸ್ ಚಾನಲ್‌ಗಳಾದ ಟಿ.ವಿ. ೯, ಸುವರ್ಣ ೨೪x೭ ಜನಶ್ರೀ, ಸಮಯ ೨೪x೭, ಮುಂತಾದ ಚಾನಲ್‌ಗಳಲ್ಲಿ ಒಂದೇ ವಿಷಯವನ್ನು ವರದಿಗಾರರೂ ಹಲವಾರು ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಯ ಮೂಲಕ ಜನರನ್ನು ತಲುಪಿಸುವ ಪ್ರಯತ್ನ ಮಾಡುತ್ತಿದ್ದಾರೆ. ಇದು ಕೈಗೂಡುವಾಗ ಭಾಷೆಯ ವಿಭಿನ್ನ ಶೈಲಿ ಮತ್ತು ಪ್ರಯೋಗಳು ಕಾಣಿಸಿಕೊಳ್ಳುತ್ತವೆ. ಒಂದೇ ವಿಷಯವನ್ನು ಬೇರೆ ಬೇರೆ ನಿರೂಪಕರು ಅಭಿವ್ಯಕ್ತಿಸುವಾಗ ಯಾವ ರೀತಿಯ ಭಾಷಾ ವೈವಿಧ್ಯತೆಗಳು ಗೋಚರಿಸುತ್ತವೆಂಬುದು ಕುತೂಹಲಕಾರಿ ವಿಚಾರ. ಈ ವೈವಿಧ್ಯತೆಯನ್ನು ಪರಿಶೀಲಿಸುವುದು ಈ ಅಧ್ಯಯನದ ಒಂದು ಉದ್ದೇಶವಾಗಿದೆ.

ಸಮೂಹ ಮಾಧ್ಯಮ ಉಪಕರಣಗಳಲ್ಲಿ ಟಿ.ವಿ. ಪ್ರಧಾನವಾದುದು. ಇಂದು ಕಂಪ್ಯೂಟರ್, ಮೊಬೈಲ್, ಇಂಟರ್‌ನೆಟ್‌ಗಳ ಕಾರ್ಯ ನಿರ್ವಹಿಸುವ ರೀತಿಯಲ್ಲಿ ಒಂದೇ ಉಪಕರಣವನ್ನು ತಂತ್ರಜ್ಞಾನ ನಿರ್ಮಿಸಿದೆ. ಮೊಬೈಲ್ ಇವೆಲ್ಲವುಗಳ ಪಾತ್ರ ವಹಿಸುವುದು, ಮುನ್ನೆಡೆದಿದೆ. ಅದಕ್ಕೂ ಮಿಗಿಲಾಗಿ ಇದು ಯಾವ ರೀತಿ ಪರಿಣಾಮ ಇಂಟರ್‌ನೆಟ್ ಭಾಷೆ, ಮೊಬೈಲ್ ಭಾಷೆಯ ಬಗ್ಗೆ ತಿಳಿಯುವುದು ಅವಶ್ಯಕವಾಗಿದೆ.

ಭಾಷೆಯ ವ್ಯಕ್ತಿಯ ಮನಸ್ಸಿಗೆ ಹಿಡಿದ ಕೈ ಕನ್ನಡಿಯಂತೆಯೇ ಸಮೂಹ ಮಾಧ್ಯಮಗಳಲ್ಲಿ ಕೂಡ ಭಾಷೆ ಪ್ರಮುಖ ಅಭಿವ್ಯಕ್ತಿ ಮಾಧ್ಯಮವಾಗಿದೆ. ಭಾಷೆಯು ಸಮೂಹ ಮಾಧ್ಯಮಗಳ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾಗಿದೆ. ಸಮೂಹ ಮಾಧ್ಯಮಗಳಲ್ಲಿ ಸಮಕಾಲೀನ ಸಂದರ್ಭದಲ್ಲಿ ಭಾಷಾ ಬಳಕೆ ದಿನೇ ದಿನೇ ಹೊಸ ಪದಗಳನ್ನು, ವಾಕ್ಯಗಳನ್ನು ಸೃಷ್ಟಿಸುತ್ತಿವೆ. ಈ ಪದ ಸೃಷ್ಟಿಯ ಕಾರ್ಯ ಹೆಚ್ಚಾದಂತೆ ಭಾಷಾ ಬೆಳವಣಿಗೆ ಆಗುತ್ತಿದೆ. ಸಮೂಹ ಮಾಧ್ಯಮಗಳಿಂದಾಗಿ ಕನ್ನಡ ಭಾಷೆ ಹೊಸ ಹೊಸ ಪದಕೋಶ ಹೊಂದಿದೆಯೆಂಬುದು ಅರ್ಥವಾಗುತ್ತದೆ. ಇದನ್ನು ಅಧ್ಯಯನ ಮಾಡುವ ಅಗತ್ಯವಿದೆ.

ಇತ್ತೀಚಿನ ದಿನಗಳಲ್ಲಿ ಮಾಧ್ಯಮಗಳು ಸಮಾಜದ ಪ್ರಮುಖ ಅಂಗಗಳಾಗಿವೆ. ಸಮಾಜ ಚೇತನ ಶಾಲಿಯಾಗಿ, ಕ್ರಿಯಾತ್ಮಕವಾಗಿರುವಲ್ಲಿ ಮಾಧ್ಯಮಗಳ ಪಾತ್ರ ಮುಖ್ಯ. ದೈನಂದಿನ ಸಮಾಚಾರಗಳನ್ನು ಜನಮನಕ್ಕೆ ತಲುಪಿಸುವಲ್ಲಿ ಯಶಸ್ವಿಯಾಗಿವೆ. ಹಾಗಾಗಿ ಮಾಧ್ಯಮಗಳನ್ನು ಸಮಾಜದ ಪ್ರಮುಖ ನಾಡಿಗಳೆಂದು ಕರೆಯಬಹುದು. ಈ ಮಾಧ್ಯಮಗಳ ಕುರಿತು ಅಧ್ಯಯನಗಳು ನಡೆಯುತ್ತಾ ಇವೆ. ಪ್ರತ್ಯೇಕವಾಗಿ ಒಂದೊಂದು ಸಮೂಹ ಮಾಧ್ಯಮವನ್ನು ಕುರಿತು ಅಧ್ಯಯನವನ್ನು ಮಾಡುವಂಥ ಪ್ರಕ್ರಿಯೆ ಆರಂಭಗೊಂಡಿವೆ. ಇಂದು ಸಮೂಹ ಮಾಧ್ಯಮಗಳು ಅಧ್ಯಯನದ ಆಸಕ್ತಿ ಉಂಟುಮಾಡುತ್ತಿದೆ. ಹಾಗೆಯೇ ಉದ್ಯೋಗ ಸೃಷ್ಟಿಸುವ ಕ್ಷೇತ್ರವಾಗಿದೆ. ಈ ಎರಡು ವರ್ಗಗಳಿಗೆ ಸಮೂಹ ಮಾಧ್ಯಮಗಳನ್ನು ಕುರಿತು ಶಿಕ್ಷಣಕೊಡಲು ವಿ.ವಿ. ಮಟ್ಟದಲ್ಲಿ ಖಾಸಗಿಯಾಗಿ ವಿವಿದ ಪದವಿ, ಸರ್ಟಿಫಿಕೇಟ್ ಕೋರ್ಸ್, ಡಿಪ್ಲೋಮಾ ಕೋರ್ಸ್‌ಗಳು ಚಾಲ್ತಿಯಲ್ಲಿವೆ. ಮಾಧ್ಯಮಗಳನ್ನು ಪ್ರವೇಶಿಸುವವರಿಗೆ ಶಿಕ್ಷಣ ವಲಯದಲ್ಲಿ ಕೋರ್ಸ್ ಪ್ರಕ್ರಿಯೆ ಆರಂಭಗೊಂಡಿವೆ. ಈ ಮಾಧ್ಯಮಗಳನ್ನು ಪ್ರವೇಶಿಸುವವರಿಗೆ ಶಿಕ್ಷಣ ವಲಯದಲ್ಲಿ ಒಂದೊಂದು ಕೋರ್ಸಾಗಿ ಕಲಿಸಲಾಗುತ್ತಿದೆ. ಆಸಕ್ತರಿಗೆ ಬಹುಮುಖ್ಯ ಕ್ಷೇತ್ರಗಳಾಗಿ ಮಾಧ್ಯಮಗಳು ಇಂದು ಚಾಲ್ತಿಯಲ್ಲಿವೆ.

ದಿನ ನಿತ್ಯ ಬೆಳ್ಳಂಬೆಳಿಗ್ಗೆ ಎದ್ದು ಕೂಡಲೇ ನಾವು ಟೀ, ಕಾಫಿ ಜೊತೆಗೆ ಬಿಸಿ ಬಿಸಿ ಸುದ್ದಿಯ ದಿನಪತ್ರಿಕೆಗಳು ಬೇಕು ಹಾಗೂ ಉದಯಕ್ಕೇನೆ ಟೆಲಿವಿಷನ್ ಸುದ್ದಿ ಸಮಾಚಾರಗಳು, ರೇಡಿಯೋ ನ್ಯೂಸ್‌ಗಳು ಇತ್ಯಾದಿ ಇಂದು ಮನುಷ್ಯನಿಗೆ ಅತೀ ಅಗತ್ಯವಾಗಿದೆ. ಓದು ಬರಹಬಲ್ಲವರು ಪ್ರತಿ ನಿತ್ಯ ಪತ್ರಿಕೆಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡಿರುತ್ತಾರೆ. ಅವರಿಗೆ

ಒಂದು ದಿನವೂ ಪತ್ರಿಕೆ ನೋಡದಿದ್ದರೆ ಆಗದು. ಅಂತೆಯೇ ಟೆಲಿವಿಷನ್ ಸಹ. ಕಣ್ಣಿಗೆ ಒದಗಿಸುವ ಮನರಂಜನೆಯ ಜೊತೆಗೆ ಸುದ್ದಿ – ಸಮಾಚಾರಗಳನ್ನು ನೀಡುತ್ತದೆ. ಆಕಾಶವಾಣಿಯಿಂದ ಪ್ರಸಾರವಾಗುವ ಸುದ್ದಿಯನ್ನು ಕೇಳಿಸಿಕೊಳ್ಳುತ್ತಾರೆ. ಜೀವನದ ಸಂಗಾತಿಯಾಗಿ ಈ ಮಾಧ್ಯಮಗಳು ಇಂದು ಬಳಕೆಯಾಗುತ್ತಿವೆ.

ಶಿಕ್ಷಣ ವಲಯದಲ್ಲಿ ಬಹುಮುಖ್ಯವಾದ ಪಾತ್ರವನ್ನು ಮಾಧ್ಯಮಗಳು ವಹಿಸುತ್ತಿವೆ. ಪತ್ರಿಕೆ, ರೇಡಿಯೋ, ಟೆಲಿವಿಷನ್ ಮತ್ತು ಸಿನಿಮಾಗಳು, ಸಾಮಾಜಿಕ ಶಿಕ್ಷಣದ ಜವಾಬ್ದಾರಿ ಹೊತ್ತಿರುತ್ತವೆ. ಮಾಹಿತಿಯನ್ನು ಅವು ಒದಗಿಸಿಕೊಡುವುದರ ಮೂಲಕ ಜ್ಞಾನದ ಅರಿವನ್ನು ಹೆಚ್ಚಿಸುತ್ತದೆ. ಎಲ್ಲರ ಮನೆಯಲ್ಲಿ ಟಿ.ವಿ.ಯಲ್ಲಿ ಬರುವ ಕಾರ್ಯಕ್ರಮಗಳನ್ನು ವಿಕ್ಷೀಸುವ ಮಕ್ಕಳು ತಮ್ಮ ತಮ್ಮ ಮನೆಗಳಲ್ಲಿಯೇ ಕುಳಿತು ಉಪಯುಕ್ತ ವಿಷಯದ ಬಗ್ಗೆ ಸಮಾಜದ ಗಣ್ಯವ್ಯಕ್ತಿಗಳ ಮತ್ತು ಐತಿಹಾಸ ಪ್ರಸಿದ್ಧ ಸ್ಥಳಗಳನ್ನು ಪರಿಚಯ ಮಾಡಿಕೊಳ್ಳಬಹುದು. ಸಾಕಷ್ಟು ಮಾಹಿತಿಯನ್ನು ಪಡೆಯುತ್ತಾರೆ. ಇಲ್ಲಿಂದಲೇ ಮಕ್ಕಳ ಕಲಿಕೆ ಆರಂಭವಾಗುವುದರ ಜೊತೆಗೆ ಜ್ಞಾನದ ಬೆಳವಣಿಗೆ ಆಗುತ್ತದೆ. ಇದಲ್ಲದೇ ಸಾಹಿತ್ಯೇತ್ತರ  ವಲಯಗಳಲ್ಲೂ ಟೆಲಿವಿಷನ್ ಪ್ರಮುಖವಾದ ಪಾತ್ರವನ್ನು ಪಡೆದುಕೊಂಡಿದೆ.

ದಿನ ನಿತ್ಯ ಇಪ್ಪತ್ತನಾಲ್ಕು ಘಂಟೆಗಳು ನ್ಯೂಸ್ ಪ್ರಸಾರ ಮಾಡುವ ಹಾಗೆಯೇ ಕ್ಷಣ ಕ್ಷಣವೂ ಮಾಹಿತಿಯನ್ನು ತಿಳಿಸುವ ಮೂಲಕ ಟಿ.ವಿ. ಮಾಧ್ಯಮ ಬಿತ್ತರಗೊಂಡು ಇಂದು ಆಕರ್ಷಕವಾಗಿ ಜನಪ್ರಿಯವಾಗಿದೆ. ಸಮಾಜದಲ್ಲಿ ಜರಗುವ ಸಾಮಾಜಿಕ ಕಾರ್ಯಕ್ರಮ ಆರ್ಥಿಕ ವಿಚಾರ ರಾಜಕೀಯ ಬಿಸಿ ಬಿಸಿ ಸುದ್ದಿಗಳನ್ನು ತಿಳಿಯುವ, ತಿಳಿಸುವ ನಿಟ್ಟಿನಲ್ಲಿ ಜನರಿಂದ ವಿಶ್ವಾಸ ಪಡೆದಿವೆ. ಸಾಮಾಜಿಕವಾಗಿ  ಎಚ್ಚರಿಕೆಯ ಗಂಟೆ ಹೊಡೆಯುವ ಮೂಲಕ ಸಾಮಾಜಿಕ ಜವಾಬ್ದಾರಿಯ, ಜಾಗರೂಕತೆಯನ್ನು ಮೂಡಿಸುವಲ್ಲಿ ಯಶಸ್ವಿಯಾಗುತ್ತಿವೆ. ಅಂತೆಯೇ ಕೆಲವೊಮ್ಮೆ ಸಮಾಜದಲ್ಲಿ ನಡೆಯುವ ಅಪರಾಧಗಳಿಗೆ ಪ್ರೇರಕ ಆಗಬಹುದಾಗಿ ಕಂಡು ಬಂದರೂ ಸಮಾಜಕ್ಕೆ ಎಚ್ಚರ ಮೂಡಿಸುತ್ತದೆ. ಮಾಧ್ಯಮಗಳ ಉದ್ದೇಶ ಸಮಾಜದ ಮೇಲೆ ಗಮನಹರಿಸುವುದು. ಸಾಮಾಜಿಕ ಜವಾಬ್ದಾರಿ ಕಾಪಾಡುವುದು.

ಸುದ್ದಿಗಳು ಸಾಮಾಜಿಕ ಸಮಸ್ಯೆಗಳನ್ನು, ಸವಾಲುಗಳನ್ನು ಮತ್ತು ಅವುಗಳ ಪರಿಹಾರ ಕುರಿತು ಯೋಚಿಸುವಲ್ಲಿ ವೀಕ್ಷಕರಿಗೆ ಸಹಕಾರಿಯಾಗಿರುತ್ತವೆ. ಯಾವುದೇ ಮೂಢನಂಬಿಕೆಗೆ, ಅಂಧ ಶ್ರದ್ಧೆಗೆ ಒಳಗಾಗಿ ಮೋಸ ಹೋಗದಂತೆ ವಾಹಿನಿಗಳು ಕೆಲಸ ಮಾಡಬಹುದು. ಆಗ ಜಾಗರೂಕತೆ ಬರುತ್ತದೆ. ಸಾಮಾಜಿಕ ಬದಲಾವಣೆಯ ದೃಷ್ಟಿಯಲ್ಲೂ ಸಹ ಪರಿಣಾಮ ಬೀರಿ ಅದರಿಂದ ಸಾಮಾಜಿಕ ಬದಲಾವಣೆಯಾಗುವ ಸಾಧ್ಯತೆ ಇದೆ.

ಸಮೂಹ ಮಾಧ್ಯಮಗಳು ಪ್ರೇಕ್ಷಕನನ್ನು ಹಿಡಿದಿಡಲು ಪರಿಣಾಮಕಾರಿಯಾಗಿ ಕಾರ್ಯಕ್ರಮಗಳ ಸುದ್ದಿಗಳು ಮೂಡಿಬರಲು ಹಲವಾರು ಕಸರತ್ತುಗಳನ್ನು ಮಾಡುತ್ತಿವೆ. ಅವುಗಳ ಭಾಷೆ ಬಳಕೆ ದೃಷ್ಟಿಯಿಂದಲೂ ಗಮನಾರ್ಹವಾಗಿದೆ. ಹೀಗಾಗಿ ಇಲ್ಲಿನ ಭಾಷಾ ಬಳಕೆ ಕುರಿತು ವಿಶೇಷ ಅಧ್ಯಯನ ನಡೆಯಬೇಕಿದೆ.

ಸಮೂಹದ ಭಾಷೆ ವ್ಯವಹಾರಿಕ ಕ್ಷೇತ್ರ ಎಂದರೆ ನೇರವಾಗಿ ಜನ ಸಾಮಾನ್ಯರನ್ನು ಮುಟ್ಟುವ ಜನರೊಂದಿಗೆ ಸಂವಹಿಸುವ ಬೆರೆಯುವ, ಜನರನ್ನು ಬೆರೆಯುತ್ತಾ ಬೆಳೆಸುವ ಮತ್ತು ಸಮಕಾಲೀನ ಅಗತ್ಯಗಳನ್ನು ಚರ್ಚಿಸುವ ಅತ್ಯಂತ ವಿಶಾಲವಾದ ಕ್ಷೇತ್ರ. ಭಾಷೆಯ ಬಳಕೆಯ ಜೊತೆಯಲ್ಲಿ, ಭಾಷೆಯು ಬೆಳೆಯುತ್ತಿರುತ್ತದೆ. ಇದರ ಅರ್ಥ ಭಾಷೆಯ ಬಳಕೆಯ ಸಂದರ್ಭದಲ್ಲಿ ಅನೇಕ ಬದಲಾವಣೆಗೆ ಭಾಷೆ ತನ್ನನು ಒಡ್ಡಿಕೊಳ್ಳತ್ತದೆ. ಈ ರೀತಿಯ ಹೊಸ ಹೊಸ ಬದಲಾವಣೆ ಬಡ್ಡಿ ಕೊಳ್ಳುತ್ತದೆ. ಬಹಳ ಮುಖ್ಯವಾಗಿ ಇಂಗ್ಲೀಷ್ ಭಾಷೆಯ ಒಡನಾಟ ಎಂದರೆ ತಪ್ಪಾಗಲಾರದು.

ಇತ್ತೀಚಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನದ ಅಭಿವೃದ್ಧಿಯಿಂದಾಗಿ ಮಾಧ್ಯಮಗಳಲ್ಲಿ ಪೈಪೋಟಿ ಹೆಚ್ಚಾಗಿದೆ, ಅಂದರೆ ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣದ ಪ್ರಭಾವದಿಂದಾಗಿ ಮಾಧ್ಯಮಗಳು ಉದ್ಯಮಗಳಾಗಿ ಬೆಳೆದಿವೆ. ಮಾಧ್ಯಮಗಳು ಅತೀ ವೇಗದ ಸಂವಹನ ಸಂಪರ್ಕಿಸುವಲ್ಲಿ ಪೈಪೋಟಿ ನಡೆಸುತ್ತಿವೆ. ವ್ಯಾಪಾರೀಕರಣದ ದೃಷ್ಟಿಯಿಂದ ಉದ್ಯಮಗಳಾಗಿ ಬೆಳೆದಿರುವ ಮಾಧ್ಯಮಗಳು Competative ಆಗಿರುವುದು ಸಹಜವಾಗಿದೆ. ಇಲ್ಲಿ ಸಾರ್ವತ್ರಿಕ ಸಂವಹನದ ದೃಷ್ಟಿಯಿಂದ ದೃಶ್ಯ ಮತ್ತು ಶ್ರವ್ಯ ಮಾಧ್ಯಮ ಪ್ರಚುರತೆ ಹೊಂದಿದೆ. ತಕ್ಷಣದ ಸಂಪರ್ಕವನ್ನು ಒದಗಿಸುವಲ್ಲಿ ಅವು ಯಶಸ್ವಿಯಾಗುತ್ತಿವೆ. ಈ ಮುಖಾಂತರ ಸಾರ್ವತ್ರಿಕ ಅಭಿವೃದ್ಧಿಯೊಂದಿಗೆ, ಭಾಷಾ ಅಭಿವೃದ್ಧಿಯು ಮುಖ್ಯವಾಗಿದೆ. ಆದ್ದರಿಂದ ಇಂದು ಮಾಧ್ಯಮಗಳ ಅಧ್ಯಯನ ಹಾಗೂ ಮಾಧ್ಯಮಗಳ ಭಾಷೆ ಕುರಿತಾದ ಅಧ್ಯಯನಗಳು ನಡೆಯಬೇಕಾಗಿದೆ.

ಮಾಧ್ಯಮಗಳು ನಮ್ಮ ಭವಿಷ್ಯವನ್ನು ಮತ್ತು ಭಾಷೆಯನ್ನು ಹೇಗೆ ಬದಲಾಯಿಸಿ ಬಿಡುತ್ತವೆ. ವ್ಯಕ್ತಿ ಮಾರ್ಪಾಡು ಸಮಷ್ಟಿ ಬದಲಾವಣೆ ಹೇಗಾಗಿ ಬಿಡುತ್ತದೆ. ಸಮೂಹ ಮಾಧ್ಯಮಗಳ ಪರಿಣಾಮ, ಪ್ರಭಾವ ಎಷ್ಟರಮಟ್ಟಿನದು ಎಂಬುದು ಇನ್ನು ನಮಗೆ ಸ್ಪಷ್ಟ ಪೂರ್ಣವಾಗಿ ಮನವರಿಕೆಯಾಗಿಲ್ಲ. ಅದರ ಪ್ರಭಾವವಿದೆ ಎಂಬುದಂತೂ ನಿಜ. ಆದರೆ, ಹೇಗೆ ಎಷ್ಟರ ಮಟ್ಟಿಗೆ ಎಂಬುದು ನಮಗಿನ್ನು ಪೂರ್ಣ ಅರ್ಥವಾಗದ ಸಂಗತಿಯಾಗಿದೆ. ಈ ಸತ್ಯಾಂಶದ ಬಗ್ಗೆ ಮತ್ತು ಇಲ್ಲಿನ ಭಾಷಾ ಬಳಕೆಯ ಬಗ್ಗೆ ಕುರಿತು ವಿಶೇಷ ಅಧ್ಯಯನ ನಡೆಯಬೇಕಾಗಿದೆ.

ಸಮಕಾಲೀನ ಸಂದರ್ಭದಲ್ಲಿ ನಿಮಿಷ, ನಿಮಿಷಕ್ಕೂ, ಗಂಟೆ ಗಂಟೆಗೂ ಹೆಚ್ಚು ತೀವ್ರ ಸುದ್ದಿಯ ತವಕ ತಣಿಸುವ, ವಿದ್ಯುನ್ಮಾನ ಸಾಧನಗಳು, ಬಹು ಮಾಧ್ಯಮ ಪ್ರಧಾನ, ಬೇರೆ ಬೇರೆ ಚಾನಲ್‌ಗಳಲ್ಲಿ ಸುದ್ದಿ ಅರಸುವ ಮೌನದ ಕಾರ್ಯ ಆದರೆ ಇಂದು ಆರೋಗ್ಯ ಪೂರ್ಣ ಪೈಪೋಟಿಗೆ ಹಾನಿ ಮಾಡುವ ತಂತ್ರಗಾರಿಕೆ ಇದೆ. ಇಪ್ಪತ್ತನಾಲ್ಕು ತಾಸು ಸುದ್ದಿ ವಾಹಿನಿಯಿಂದಾಗಿ, ಸುದ್ದಿಯ ತಾಜಾತನ ಕೇವಲ ಒಂದು ಗಂಟೆ ಅಥವಾ ಒಂದು ವಾರ್ತಾ ಪ್ರಸಾರದ ನಂತರ ಅದು ಚರಿತ್ರೆಯ ಘಟನೆಯಾಗಿ ದಾಖಲೆಯಾಗುತ್ತದೆ. ದಿಢೀರ್ ಸುದ್ದಿ ಸಿಗುವುದು ಚಾನಲ್‌ಗಳಿಂದ ಮಾತ್ರವಲ್ಲದೇ ಇಂದು ಇಂಟರ್‌ನೆಟ್ ಮೂಲಕ ಸುದ್ದಿಗಳು ದೊರೆಯುತ್ತಿವೆ. ಆದರಿಂದಲೇ ಅಂತರ್ ಜಾಲವನ್ನು ಹೊಸ ಮಾಧ್ಯಮ ಎಂದು ಕರೆಯಬಹುದು. ಮಾಧ್ಯಮ ಲೋಕ ಇಂದು ವಿಸ್ತೃತ ಆಗ ತೊಡಗಿದೆ. ಮುದ್ರಣ ಹಾಗೂ ಎಲೆಕ್ಟ್ರಾನಿಕ್ ಮಾಧ್ಯಮಗಳ ಭರಾಟೆ ಮುಂದುವರೆದಿದೆ. ಈ ಎಲ್ಲವುಗಳಿಂದ, ಕನ್ನಡದಲ್ಲಿ ಹೇಗೆ ಭಾಷೆ ಬಳಕೆಯಾಗುತ್ತಿದೆ ಎಂಬುದನ್ನು ತಿಳಿಯುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಒಂದು ನಿರ್ದಿಷ್ಟ ಭಾಷೆಯನ್ನು ಬಳಸುತ್ತಿರುವ ಭಾಷಿಕರು ಒಂದು ಸಲ ಮಾತನಾಡಿದ ಹಾಗೆ ಇನ್ನೊಂದು ಸಲ ಮಾತನಾಡುವುದಿಲ್ಲ. ಸಮುದಾಯದ ಜೊತೆ ಭಾಷಿಕರು ಬೆರೆಯುವುದು. ಹೆಚ್ಚಾದ ಹಾಗೆಯೇ, ಅವರ ಜೀವನದ ಕ್ಷೇತ್ರಗಳು ಬದಲಾದ ಹಾಗೆಯೇ ಭಾಷೆಯಲ್ಲಿ ವೈಯುಕ್ತಿಕವಾಗಿ ಹಾಗೂ ಸಾಮಾಜಿಕ ಬದಲಾವಣೆಗಳಾಗಿರುತ್ತವೇ. ಭಾಷಿಕರೂ ಹೊಸ ಹೊಸ ಪದಗಳನ್ನೇ ಉಚ್ಚಾರಣೆಯನ್ನು ಕಲಿಯುತ್ತಾ ಹೋಗುತ್ತಾರೆಯೇ? ಕೆಲವು, ಸಂದರ್ಭಗಳಲ್ಲಿ ಪದಗಳನ್ನೋ, ಧ್ವನಿಗಳನ್ನೋ ಭಾಷಿಕರು ಆಕಸ್ಮಿಕವಾಗಿ ಬಳಸಬಹುದೇ ಹೇಗೆ? ಭಾಷಿಕನೊಬ್ಬನಲ್ಲಿ ಉಂಟಾಗುವ ಈ ಬದಲಾವಣೆಗಳು ಭಾಷೆಯಲ್ಲಿ ಮತ್ತೇ, ಮತ್ತೇ ಬಳಕೆಯಾದಾಗ. ಭಾಷಾ ಸಮುದಾಯ ಒಂದು ಈ ಬದಲಾವಣೆಯನ್ನು ಒಪ್ಪಿಕೊಂಡಾಗ ಭಾಷಾ ವ್ಯತ್ಯಾಸಗಳಾಗುತ್ತವೇಯೇ? ಹಾಗಾಗುವುದಾದರೆ ಭಾಷೆಯ ಬದಲಾವಣೆ ಬಗ್ಗೆ ತಿಳಿಯುವುದು ಅವಶ್ಯಕವಾಗಿದೆ.

ಸುದ್ದಿ ವಾಚಕರು, ನಿರೂಪಣೆಯನ್ನು ಮಾಡುವ ನಿರೂಪಕರು, ಭಾಷೆಯನ್ನು ಪ್ರಾದೇಶಿಕ ಉಪಭಾಷೆಗಳ ಮೂಲಕ ವಿಶಿಷ್ಟವಾಗಿ ಬಳಸುವುದನ್ನು ನಾವು ಕಾಣುತ್ತೇವೆ. ಉದಾಹರಣೆಗೆ ಸಂಜೆ ೬. ೩೦ ಕ್ಕೆ ಸುವರ್ಣ ಸುದ್ದಿ ವಾಹಿನಿಯಲ್ಲಿ ಪ್ರಸಾರ ವಾಗುವ 'ಚಹಾ-ಚೂಡ ಸುದ್ದಿ ನೋಡ' ಎಂಬ ಸುದ್ದಿಯಲ್ಲಿ ಬೀದರ್, ಗುಲ್ಬರ್ಗಾ, ಬಿಜಾಪುರ ಉತ್ತರ ಕರ್ನಾಟಕ ಭಾಗದ ಸಾಮಾಜಿಕ ಉಪಭಾಷೆ ಬಳಸಲಾಗುತ್ತದೆ. ಅಲ್ಲಿನ ಸಂದರ್ಭಕ್ಕೆ, ಸಮಯಕ್ಕೆ ಅನುಗುಣವಾಗಿ ದೃಶ್ಯ ಮತ್ತು ಶ್ರವ್ಯ ಎರಡೂ ಸಹ ಪರಿಣಾಮಕಾರಿಯಾಗಿದ್ದು, ಭಾಷೆ ಔಪಚಾರಕವೂ ಅಲ್ಲದ ಅನೌಪಚಾರಿಕವೂ ಅಲ್ಲದ ವಿಭಿನ್ನವಾದ, ವಿಶಿಷ್ಟವಾದ ರೀತಿಯಲ್ಲಿ ಬಳಕೆಯಾಗುವುದು ಕಂಡುಬರುತ್ತದೆ. ಒಮ್ಮೊಮ್ಮೆ ಆಡುಮಾತಿನಂತೆ ಭಾಷೆ ಬಳಸಲ್ಪಟ್ಟರೂ ಅಲ್ಲಿನ ವಾಕ್ಯ ರಚನೆಗಳು, ಪದ ರಚನೆಗಳು, ವಿಭಿನ್ನವಾಗಿಯೂ, ಸರಳವೂ, ವಿಶಿಷ್ಟವಾಗಿಯೂ ಮತ್ತು ಸಂಕೀರ್ಣವೂ

ಕೂಡ ಆಗಿರುತ್ತವೆ. ಸಣ್ಣ ಮತ್ತು ಸಂಕೀರ್ಣ ವಾಕ್ಯಗಳ ರಚನೆಗೊಂಡರು, ಸಹ ಕೆಲವೊಮ್ಮೆ ಆ ವಾಕ್ಯಗಳ ಅಪೂರ್ಣ ವಾಕ್ಯಗಳಂತೆ ಕಂಡು ಬಂದರೂ ಅರ್ಥ ಪೂರ್ಣವಾಗಿ ಇರುತ್ತವೆ. ಉಪಭಾಷೆಗಳು ತಮ್ಮ ಗಡಿದಾಟಿ ಸಂಪರ್ಕ ಸಾಧಿಸುತ್ತಿವೆ. ಉಪಭಾಷೆಗಳ ನಡುವೆ ಸಂವಹನ ಪ್ರಮಾಣ ಕಡಿಮೆಯಾಗಿ ಸ್ವತಂತ್ರ ಭಾಷೆಗಳಾಗುವುದರ ಬದಲಿಗೆ, ಉಪಭಾಷೆಗಳ ನಡುವೆ ಸಂವಹನ ಪ್ರಮಾಣ ಹೆಚ್ಚಾಗುತ್ತಿವೆ. ಬೇಕಾದಾಗ ಸುದ್ದಿಯನ್ನು ಪಡೆಯಬಹುದು ಮತ್ತು ಸುದಿಗಳನ್ನು ಮತ್ತೊಬ್ಬರಿಗೆ ರವಾನಿಸಬಹುದು. ಇಂತಹ ಮಾಯಾಜಾಲ ನಮ್ಮ ಬೆರಳ ತುದಿಯಲ್ಲಿದೆ. ಪ್ರಸ್ತುತ ಅಧ್ಯಯನದಲ್ಲಿ ಈ ರೀತಿಯ ಸುದ್ದಿ ಮಾಧ್ಯಮಗಳ ಮತ್ತು ಭಾಷೆಯ ಸಂಬಂಧವನ್ನು ಪರಿಶೀಲಿಸಿ, ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಈ ಹಿನ್ನೆಲೆಯಲ್ಲಿ ಟಿ.ವಿ. ಮಾಧ್ಯಮದಲ್ಲಿ ಪ್ರಸಾರಗೊಳ್ಳುವ ನಾನಾ ರೀತಿಯ ಕಾರ್ಯಕ್ರಮಗಳಲ್ಲಿ ಒಂದು ಗಂಟೆಗೆ ಒಂದು ಸಾರಿ ದಿನದ ಇಪ್ಪನಾಲ್ಕು ಗಂಟೆಗಳೂ ಪ್ರಸಾರವಾಗುವ ಸುದ್ದಿ ಒಂದು. ಅಂತಹ ಸುದ್ದಿಯಲ್ಲಿ ಭಾಷೆ ಸಂವಹನಗೊಳ್ಳುತ್ತಿರುವ ಬಗೆ, ರಚನೆ ಮತ್ತು ಭಾಷೆಯ ಬಳಕೆ ಕುತೂಹಲ ಎನಿಸಿದೆ. ಕನ್ನಡ ಖಾಸಗಿ ಸುದ್ದಿವಾಹಿನಿಗಳನ್ನು ಅನುಲಕ್ಷಿಸಿ ಈ ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಉದ್ದೇಶ:**

ವಿವಿಧ ಸುದ್ದಿ ವಾಹಿನಿಗಳಲ್ಲಿ ಸುದ್ದಿ ಓದುವಾಗ ಬಳಕೆಯಾಗುತ್ತಿರುವ ಭಾಷೆ ಹೇಗೆ ಬರಹದ ಕನ್ನಡ ಭಾಷೆಗಿಂತ ಅಥವಾ ಗ್ರಾಂಥಿಕ ಭಾಷೆಗಿಂತ ಮತ್ತು ಆಡುಮಾತಿನ ಕನ್ನಡಕ್ಕಿಂತ ಭಿನ್ನವಾಗಿದೆ ಎಂಬುದನ್ನ ವಿಶ್ಲೇಷಿಸುವುದೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಆಡುವಂಥ ಮಾತು, ಬಳಸುವಂಥ ಭಾಷೆ, ನಿರೂಪಣೆ ಕುತೂಹಲಭರಿತವಾಗಿದೆ. ಕೆಲವೊಮ್ಮೆ ವ್ಯಂಗ್ಯಾರ್ಥದಲ್ಲಿ ಬಳಕೆಯಾದರೆ, ಮತ್ತೆ ಕೆಲವೊಮ್ಮೆ ನಾಟಕೀಯವಾಗಿಯೂ ಬಳಕೆಯಾಗುತ್ತಿರುವುದನ್ನು ನೋಡಬಹುದು. ಅಂದರೆ ವಿವಿಧ ವಲಯಗಳಲ್ಲಿ ಬಳಕೆಯಾಗುತ್ತಿರುವ ಕನ್ನಡ ಸುದ್ದಿ ಓದುವಾಗ ವಿಭಿನ್ನವಾಗಿ ಬಳಕೆಯಾಗುತ್ತಿದೆಯೆಂಬುದನ್ನು ಗಮನಿಸುವುದು ಮತ್ತು ಇಲ್ಲಿ ಬಳಕೆಯಾಗುತ್ತಿರುವ ಪದ, ವಾಕ್ಯ, ಧ್ವನಿ, ಮತ್ತು ಪದಕೋಶ ಹೇಗೆ ವಿಶಿಷ್ಟವೂ, ವಿಭಿನ್ನವೂ ಆಗಿದೆ, ಅದು ಜನ ಸಾಮಾನ್ಯರನ್ನು ಸುಲಭವಾಗಿ ಮುಟ್ಟುವಲ್ಲಿ ಯಶಸ್ವಿಯಾಗಿದೆಯೇ ಎಂಬುದನ್ನು ವಿಶ್ಲೇಷಿಸುವುದು ಕೂಡ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ.

**ಅಧ್ಯಯನದ ಪ್ರಾಮುಖ್ಯತೆ:**

ಪ್ರಸ್ತುತ ಅಧ್ಯಯನವು ಹಲವಾರು ದೃಷ್ಟಿ ಕೋನಗಳಿಂದ ಮಹತ್ವದ್ದು ಕನ್ನಡ ಭಾಷೆಯಲ್ಲಿನ ಬಳಕೆ ಇತ್ತೀಚಿನ ದಿನಗಳಲ್ಲಿ ವೈವಿಧ್ಯತೆಯಿಂದ ಕೂಡಿದೆ. ಇದಕ್ಕೆ ಕಾರಣಗಳು ಇಲ್ಲದೇ ಇಲ್ಲ. ಅನೇಕ ಒತ್ತಡಗಳಿಂದ ಕನ್ನಡ ಭಾಷೆಯ ಬರಹ ಮತ್ತು ಆಡುಮಾತಿನ ಮಾದರಿಗಳು ವಿಸ್ತರಿಸಿಕೊಳ್ಳುತ್ತಿವೆ.

ಉದಾಹರಣೆಗೆ: ಸಮೂಹ ಮಾಧ್ಯಮಗಳಾದ ಪತ್ರಿಕೆ, ರೇಡಿಯೋ, ದೂರದರ್ಶನ, ಆಡಳಿತದ ಮತ್ತು ಕಾನೂನು ಮತ್ತು ಆರ್ಥಿಕ, ರಾಜಕೀಯ, ಸಾಮಾಜಿಕ ಮುಂತಾದ ವಲಯಗಳಲ್ಲಿ ಕನ್ನಡ ಭಾಷೆಯ ಬಳಕೆಯ ವಲಯಗಳು ವಿಸ್ತರಿಸಿದ್ದಷ್ಟು ಬಳಕೆ ಮಾಡಬೇಕಾದ ರೂಪಕಗಳ ಬಗ್ಗೆ ಗೊಂದಲ ಸೃಷ್ಟಿಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಭಾಷಾ ಬಳಕೆಯ ಮಾದರಿಗಳನ್ನು ಗುರುತಿಸಿ ಅವುಗಳ ಬಳಕೆಯ ಸ್ವರೂಪವನ್ನು ವಿಶ್ಲೇಷಿಸುವುದರಿಂದ ಪ್ರಸ್ತುತ ಅಧ್ಯಯನವು ಮಹತ್ವದಾಗಿದೆ. ಇಂತಹ ಅಧ್ಯಯನಗಳು ಕನ್ನಡದಲ್ಲಿ ಹೆಚ್ಚು ಹೆಚ್ಚು ಆಗಬೇಕಿದೆ.

**ಅಧ್ಯಯನದ ವ್ಯಾಪ್ತಿ:**

ಅಧ್ಯಯನದ ಇತಿಮಿತಿಗೆ ಒಳಪಟ್ಟು ವ್ಯಾಪ್ತಿಯನ್ನು ನಿರ್ಧರಿಸಲಾಗಿದೆ. ಸಮೂಹ ಮಾಧ್ಯಮವಾದ ಖಾಸಗೀ ಟಿ.ವಿ. ಸುದ್ದಿ ವಾಹಿನಿಗಳಾದ ಸುವರ್ಣ ೨೪ x ೭, ಜನಶ್ರೀ, ಟಿ.ವಿ. ೯, ಸಮಯ ೨೪ x ೭ ಈ ಸುದ್ದಿ ವಾಹಿನಿಗಳಲ್ಲಿ ಬಳಕೆಯಾಗಿರುವ ಭಾಷೆಯನ್ನು ಮಾತ್ರ ಕುರಿತು ಚರ್ಚಿಸಲಾಗಿದೆ. ಅದರಲ್ಲಿ ಇತ್ತೀಚಿನ ಅಂದರೆ ೨೦೧೧-೨೦೧೨ನೇ ಸಾಲಿಗೆ ಬಂದಿರುವ 'ಸುದ್ದಿ'ಯನ್ನು ಆಧರಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇದು ಈ ಅಧ್ಯಯನದ ವ್ಯಾಪ್ತಿಯಾಗಿದೆ.

**ಕೊನೆ ಟಿಪ್ಪಣಿ**

| | |
|---|---|
| ಎಂ.ಎಚ್. ಕೃಷ್ಣಯ್ಯ | ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ. |
| ಪಿ. ರಾಜೇಂದ್ರ | ಮಾಧ್ಯಮ ಮಾರ್ಗದರ್ಶಿ. |

## ಅಧ್ಯಾಯ - ೨

**ಕನ್ನಡ ಸಮೂಹ ಮಾಧ್ಯಮಗಳು: (ಡಾ॥ ಟಿ.ಸಿ. ಪೂರ್ಣಿಮ ಅವರು ನಿರೂಪಿಸಿರುವಂತೆ)**



# ಮಾಧ್ಯಮಗಳ ಹುಟ್ಟು ಮತ್ತು ಬೆಳವಣಿಗೆ

ಸಮೂಹ ಮಾಧ್ಯಮಗಳೆಂದರೆ ಪತ್ರಿಕೆ, ರೇಡಿಯೋ, ಟಿ.ವಿ.ಗಳಾಗಿವೆ. ಈ ಸಮೂಹ ಮಾಧ್ಯಮಗಳು ಆಧುನಿಕ ಸಂದರ್ಭದಲ್ಲಿ ಬಹಳ ಪ್ರಬಲವಾದ ಮಾಧ್ಯಮವಾಗಿದೆ. ತಂತ್ರಜ್ಞಾನದ ಮೂಲಕ ಸಮಾಜಕ್ಕೆ ಒಂದು ಉತ್ತಮವಾದ ಕೊಡುಗೆಯಾಗಿದೆ. ಇಪ್ಪತ್ತೊಂಬತ್ತನೆಯ ಶತಮಾನದಲ್ಲಿ ಮಾಹಿತಿ ನೀಡಲು ಜ್ಞಾನಾಭಿವೃದ್ಧಿ ಮಾಡಲು, ಮನೋರಂಜನೆ ಕೊಡಲು ಕ್ರೀಡೆಗಳನ್ನು ಯಥವತ್ತಾಗಿ ತಕ್ಷಣವೇ ನೋಡಲು ಸಮೂಹ ಮಾಧ್ಯಮ ಅಗತ್ಯವಾಗಿದೆ. ಸಮಕಾಲೀನ ಸಂದರ್ಭದಲ್ಲಿ ಒಂದು ದೊಡ್ಡ ಪಾವಡವೇ ಸಮೂಹ ಮಾಧ್ಯಮಗಳ ಮೂಲಕ ನಡೆಯುತ್ತಿದೆ ಎಂದರೆ ತಪ್ಪಾಗಲಾರದು. ಇಡೀ ಸಮಾಜಕ್ಕೆ ಇಂದು ಇವುಗಳ ಪಾತ್ರ ಬಹಳ ಮಹತ್ವವಾದುದ್ದು ಆಗಿದೆ.

ಆಧುನಿಕ ಸಂಪರ್ಕ ವ್ಯವಸ್ಥೆಯಲ್ಲಿ ಮಾಧ್ಯಮ ಎನ್ನುವುದು ಕೇವಲ ಒಂದು ಭೌತಿಕ ಸಾಧನವಲ್ಲ, ಅದು ಇಡೀ ವ್ಯವಸ್ಥೆಯೇ ಆಗಿದೆ ಎನ್ನುವ ಅಂಶವನ್ನು ಗಮನಿಸಬೇಕು. ಮನುಷ್ಯ ಪ್ರಥಮತಃ ತನ್ನ ಅಂತರಂಗದ ಅನಿಸಿಕೆಯನ್ನು ತನ್ನ ಬದುಕಿನ ಬೇಡಿಕೆಯನ್ನು ಸುತ್ತಲಿನ ಸಮಾಜ/ಜಗತ್ತಿನೊಂದಿಗೆ ತನಗೆ ಪ್ರಕೃತಿಯಿಂದ ಸಿದ್ದವಾಗಿರುವ ರೀತಿಯದೆ ಅಂದರೆ, ಅದು ಭಾಷೆ, ಹಾವ-ಭಾವ, ಭಂಗಿ, ಕೂಗು, ಅಳು, ನಗು ಮುಂತಾದ ಭಾವನಾತ್ಮಕ ಅಭಿವ್ಯಕ್ತಿ. ಹೀಗೆ ತನಗೆ ತೋಚಿದ ರೀತಿಯಲ್ಲಿ ಹೊರ ಹಾಕಿ, ಅದಕ್ಕೆ ತಕ್ಕ ಪ್ರತಿಸ್ಪಂದನೆಯನ್ನು ಪಡೆಯುವುದು ಜೀವ ಜಗತ್ತಿನ ಮೊದಲ ಸಂಪರ್ಕ ಕೊಂಡಿ. ಈ ಕ್ರಿಯೆಗೆ ಅಂದರೆ, ಒಬ್ಬನ ಅನಿಸಿಕೆ, ಮತ್ತೊಬ್ಬನಿಗೆ, ಇತರರಿಗೆ ತಲುಪಲು ಬಳಕೆಯಾಗುವ ಕ್ರಮವೇ ಮಾಧ್ಯಮ, ಅಭಿವ್ಯಕ್ತಿ ಮಾಧ್ಯಮಗಳು ಎನಿಸಿಕೊಳ್ಳುತ್ತವೆ.

ಇಪ್ಪತ್ತೊಂದನೇ ಶತಮಾನದ ಸಂದರ್ಭದಲ್ಲಿ ಮಾಹಿತಿ ತಂತ್ರಜ್ಞಾನದಿಂದ ವಿಶ್ವಮಟ್ಟದ ವ್ಯಾಪಾರ, ವಹಿವಾಟು ಕ್ಷಣ ಕಾಲದಲ್ಲಿಯೇ ನಡೆಯುತ್ತಿದೆ. ಅದಕ್ಕಾಗಿ ಕಾಲ್ ಸೆಂಟರ್‌ಗಳು ಸ್ಥಾಪಿತವಾಗಿವೆ. ಹೊಸ ಹೊಸ ಸಂವಹನ ಉಪಕರಣಗಳ ಆವಿಷ್ಕಾರವಾದ ಹಾಗೆಯೇ ಮಾನವ ದೂರದ ಊರುಗಳ ದೂರುಗಳನ್ನು ಗೆಲ್ಲುವಲ್ಲಿ ಯಶಸ್ಸುಗಳಿಸುತ್ತಿದ್ದಾನೆ.

ಸಮೂಹ ಮಾಧ್ಯಮಗಳ ಆವಿಷ್ಕಾರಕ್ಕೆ ಮಾನವನ ಸಂವಹನದ ಭಾವನಾತ್ಮಕ ಒತ್ತಡವೇ ಕಾರಣ. ಸಂವಹನ ಪ್ರಕ್ರಿಯೆ ಯಶಸ್ಸು ಕಾಣಲು ಮಿಲಿಯನಗಟ್ಟಲೇ ವರ್ಷಗಳು ಬೇಕಾದವು ಎಂಬುದು ನಮಗೆ ತಿಳಿದಿರುವ ವಾಸ್ತವವಾಗಿದೆ. ಎಷ್ಟು ವರ್ಷಗಳು ತೆಗೆದುಕೊಂಡವು ಎಂಬುದು ನಮಗೆ ತಿಳಿದಿದೆ. ಭಾಷೆಗಳೂ ಬೆಳೆಯಬೇಕಿತ್ತು, ಆಗ ನಾಗರೀಕತೆಗಳು ವಿಕಾಸಗೊಂಡಂತೆ, ಭಾಷೆಗಳು ಬದಲಾಗದಂತೆ ಸಂವಹನ ಜನ ಜೀವನದಲ್ಲಿ ಸುಲಭವಾಗತೊಡಗಿತ್ತು.

ಮೊದ ಮೊದಲ ಸಂಹವನವು ಮೌಖಿಕ ಹಂತದಲ್ಲಿದ್ದು, ನಂತರ ಶಾಬ್ದಿಕ ಹಂತ, (ಮಾತು) ತಲುಪಿತು. ಈಗ ಯಾಂತ್ರಿಕ/ತಾಂತ್ರಿಕ ಪ್ರಗತಿಯಿಂದಾಗಿ ದೃಶ್ಯ + ಶ್ರವ್ಯ ಎರಡು ಬೆರೆತಿವೆ. ಹಾಗಾಗಿ ಘಟನೆಗಳನ್ನು ಕೇಳುತ್ತಲೇ ನೋಡಬಹುದು, ನೋಡುತ್ತಲೇ ಕೇಳಬಹುದು. ಇದು ಹೆಚ್ಚು ಪರಿಣಾಮಕಾರಿ. ಏಕೆಂದರೆ, ಇಲ್ಲಿ ಅಕ್ಷರಸ್ಥರು ಮತ್ತು ಅನಕ್ಷಸ್ಥರು ಇಬ್ಬರಿಗೂ ತಲುಪುತ್ತದೆ. ಪಾರಂಪರಿಕ ಸಮಾಜದಲ್ಲಿ ಮೌಖಿಕ ಸಂವಹನವೇ ಮುಖ್ಯವಾಗಿತ್ತು. ಕೈಗಾರಿಕಾ ಕ್ರಾಂತಿಯೊಂದಿಗೆ, ಅಭಿವ್ಯಕ್ತಿ ಸ್ವಾಂತಂತ್ರ್ಯಕ್ಕೆ ಹೊಸ ಅರ್ಥ ಬಂದಿತ್ತು. ರಾಜಕೀಯ ಸಿದ್ಧಾಂತಗಳು ಬೆಳೆದವು, ಸಮೂಹ ಮಾಧ್ಯಮಗಳು ಯಂತ್ರಯುಗದ ಹರಿಕಾರ ಎನಿಸಿದವು.

<u>ಪತ್ರಿಕೆ:</u>

ಇದು ಮುದ್ರಣ ಮಾಧ್ಯಮ ಮತ್ತು ಲಿಖಿತ ರೂಪದ ಸಂವಹನ ಮಾಧ್ಯಮವಾಗಿದೆ. ಸಮೂಹ ಮಾಧ್ಯಮಗಳಲ್ಲಿ ಪತ್ರಿಕೆಗೆ ಪ್ರಮುಖ ಸ್ಥಾನವಿದೆ. ಪ್ರತಿನಿತ್ಯ ಲಕ್ಷಗಟ್ಟಲೇ ಅಕ್ಷರಸ್ಥ ಜನರನ್ನು ಪತ್ರಿಕೆಗಳ ಸುದ್ದಿ ತಲುಪಿಸುತ್ತದೆ. ಪತ್ರಿಕೆ ಓದುವ ವರ್ಗವನ್ನು ಸೃಷ್ಟಿಸುವ ಒಂದು ಮಹತ್ವದ ಕೆಲಸವನ್ನು ಮಾಡುತ್ತದೆ. ಪತ್ರಿಕೆಯು ಭಾಷೆಯನ್ನು ಬಳಸಿ, ಹೊಸ ಪದ ರಚನೆಯ ಸೃಷ್ಟಿಸುವ ಮೂಲಕ ಭಾಷಾ ಬದಲಾವಣೆಗೆ ಕಾರಣವಾಗುತ್ತದೆ. ಪತ್ರಿಕೆ ಒಂದು ದೊಡ್ಡ ಉದ್ಯಮವಾಗಿದೆ. ಇದರ ಪಾತ್ರ ಮಹತ್ವದ್ದು ಮತ್ತು ಅವಿಸ್ಮರಣೀಯ ಎನ್ನಬಹುದು. ಪತ್ರಿಕೆ ಎಂಬ ಪದವು ಇಂಗ್ಲೀಷ್‌ನ "ಪ್ರೆಸ್" ಎಂಬ ಪದಕ್ಕೆ ಕನ್ನಡದಲ್ಲಿ 'ಪತ್ರಿಕೆ' ಎಂಬ ಪದವನ್ನು ಬಳಸುತ್ತಿದ್ದೇವೆ. ಪತ್ರಿಕೆಯ ಮೂಲ ಉದ್ದೇಶ ಪರಿಸರದ ಸುದ್ದಿಯನ್ನು ಜನ ಸಮೂಹಕ್ಕೆ ಅಕ್ಷರ ಮಾಧ್ಯಮದ ಮೂಲಕ ಬಿತ್ತರಿಸುವುದಾಗಿದೆ. ಆ ಮೂಲಕ ಜನಾಂಗದ ಸರ್ವಾಂಗೀಣ ಪ್ರಗತಿ ಸಾಧಿಸುವುದು 'ಸುದ್ದಿ'ಯ ಕೆಲಸವಾಗಿದೆ. 'ಸುದ್ದಿ' ಎಂಬ ಪದವನ್ನು ಇಂಗ್ಲೀಷ್‌ನ "ನ್ಯೂಸ್" ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ. 'ನ್ಯೂಸ್' ಎಂದರೆ ಸಾಮಾನ್ಯವಾಗಿ ಸುದ್ದಿ ಸಮಾಚಾರವನ್ನು ಸುತ್ತಲಿನ ಪರಿಸರದ ಸುದ್ದಿ ಎಂದು ಅರ್ಥ ನ್ಯೂಸ್ ಎಂಬುದು ವಿಸ್ತೃತ ರೂಪ ಇಂಗ್ಲೀಷಿನಲ್ಲಿ ಈ ರೀತಿ ವ್ಯಾಖ್ಯಾನಿಸಲಾಗಿದೆ.

N = North
E = East
W = West
S = South

ಈ ನಾಲ್ಕು ದಿಕ್ಕಿನ ಅಂದರೆ ಎಲ್ಲಾ ದಿಕ್ಕುಗಳಿಂದ ಬಂದ ಸಮಾಚಾರವನ್ನು 'ನ್ಯೂಸ್' ಮೂಲಕ ಸಾಮಾನ್ಯ ಜನತೆಯ ಮುಂದೆ ಇಡುವುದು ಸುದ್ದಿಗೆ ವಿಶಾಲತೆಯನ್ನು ನೀಡುವ ಒಂದು ಜಾಣ್ಮೆಯ ವಿಧಾನವೆನ್ನಬಹುದು ಇದು ಶಬ್ದ ಚಮತ್ಕಾರವಾದರು ಅದರ ಬಾಹುಳ್ಯವನ್ನು ಅರ್ಥಪೂರ್ಣವಾಗಿ ತಿಳಿಸುತ್ತದೆ. ಈ ನಾಲ್ಕು ದಿಕ್ಕಿನ ಸುದ್ದಿಯನ್ನು 'ನ್ಯೂಸ್' ಎಂದು ಕರೆದಿದ್ದಾರೆ.

ಸುದ್ದಿಗಳನ್ನು, ಸಾರ್ವಜನಿಕ ಅಭಿಪ್ರಾಯಗಳನ್ನು ಮತ್ತು ಸಾರ್ವಜನಿಕ ಸತ್ಯ ಮತ್ತು ವಿನೋದಗಳನ್ನು, ಆಧುನಿಕ ಪ್ರಚಾರ ಮಾರ್ಗಗಳ ಮೂಲಕ ಕ್ರಮಬದ್ಧವಾಗಿ ನಂಬಿಕೆಗೆ ಅರ್ಹವಾಗುವಂತೆ ಪ್ರಚಾರ ಪಡಿಸುವುದೇ ಪತ್ರಿಕೋದ್ಯಮದ ಕೆಲಸವಾಗಿದೆ.
ಅಮೆರಿಕಾದ ವಿದ್ವಾಂಸನಾದ ರೋಲೆಂಡ್-ಇ-ವುಲ್‌ಸೆಲ್ ಇವರ ಈ ಮಾತುಗಳು ಪತ್ರಿಕೆಯ ಸ್ವರೂಪ ಹಾಗೂ ಉದ್ದೇಶಗಳನ್ನು ಸ್ಪಷ್ಟಪಡಿಸುತ್ತದೆ.

- ಪತ್ರಿಕೆಯನ್ನು ರಾಷ್ಟ್ರಾಡಳಿತದ ನಾಲ್ಕನೇ ಸ್ತಂಭ ಎನ್ನಬಹುದು.
- ಇದೊಂದು ಖಾಸಗೀ ಉದ್ಯಮ ಸಂಪೂರ್ಣ ಸ್ವತಂತ್ರವಾಗಿ ಉಸಿರಾಡುತ್ತದೆ.
- ಒಂದು ರಾಷ್ಟ್ರದ ಅಳಿವು, ಉಳಿವು ಹಾಗೂ ಬೆಳವಣಿಗೆಗೆ ಕಾರಣವಾಗಬಲ್ಲ ಅದ್ಭುತ ಶಕ್ತಿ ಇದಕ್ಕಿದೆ.
- ದೇಶದ ಸ್ವಾತಂತ್ರ್ಯ ಮತ್ತು ಸಮಗ್ರತೆಗಳನ್ನು ಉಳಿಸಿಕೊಳ್ಳುವುದರಲ್ಲಿ ಆಸಕ್ತಿ ಇದೆ.
- ದೇಶದ ಸರ್ವಾಂಗೀಣ ಅಭಿವೃದ್ಧಿಯಲ್ಲಿಯೂ ಸಕ್ರಿಯ ಪಾತ್ರವಹಿಸಿ ಅತ್ಯಂತ ಧೈಯ ಹಾಗೂ ಶ್ರದ್ಧೆಯಿಂದ ಕಾರ್ಯ ನಿರ್ವಹಿಸುತ್ತದೆ.

**ಕನ್ನಡ ಪತ್ರಿಕೆಗಳ ಪ್ರಾಚೀನತೆ:**

ಕನ್ನಡ ನಾಡಿನಲ್ಲಿ 'ಹಿತೇಚ್ಛು'ವೆಂಬುದು ೧೮೭೦ ರಲ್ಲಿ ಕಲಾದಗಿ (ಕಲಾಡ್ಗಿ) ಎಂಬಲ್ಲಿ ಪ್ರಚುರವಾಗುತ್ತಿತ್ತು. ೧೮೮೦ರಲ್ಲಿ ಧಾರವಾಡದಲ್ಲಿ ಮೂರು ಕನ್ನಡ ಪತ್ರಿಕೆಗಳಲ್ಲಿ ಬೆಳಗಾವಿಯಲ್ಲಿ ಇನ್ನೂ ಮೂರು ಪ್ರಚಾರವಾಗುತ್ತಿದ್ದವು. ಮೈಸೂರಿನಲ್ಲಿ ಸ್ಥಾಪಿತವಾಯಿತು. ಮೈಸೂರು ಸರ್ಕಾರದ "ಗೆಜೆಟ್" ೧೮೬೬ರಲ್ಲಿ ಉಪಕ್ರಮಿಸಿತು. "ಡೆಯಿಲೀ ಪೋಸ್ಟ್" 'ಈವನಿಂಗ್ ಮೆಯಿಲ್' ಎಂಬ ಇಂಗ್ಲೀಷ್ ಪತ್ರಿಕೆಗಳು ಹಿಂದೆ ಇದ್ದ 'ಕರ್ಣಾಟಕದ ಪ್ರಕಾಶಿಕೆ' ಮತ್ತು ಈಗಲೂ ಇರುವ 'ಮೈಸೂರು ಸ್ಟಾರ್' ವೃತ್ತಾಂತ ಪತ್ರಿಕೆ ಎಂಬ ಕನ್ನಡ ಪತ್ರಿಕೆಗಳು ಮೈಸೂರು ರಾಜ್ಯದಲ್ಲಿ ಮೊದಲು ಹುಟ್ಟಿದ ಪತ್ರಿಕೆಗಳ ಪೈಕಿ ಮುಖ್ಯವಾದವು.

ಹೀಗೆ ಪತ್ರಿಕೆಗಳು ಇಂಡಿಯಾ ದೇಶದಲ್ಲಿ ಬಹುಕಾಲದ ಹಿಂದೆಯೇ ಪ್ರಾರಂಭವಾಗಿದ್ದರೂ ಹೆಚ್ಚು ಪ್ರಾಶಸ್ತ್ಯವೂ ಪ್ರಚಾರವೂ ದೊರೆಯುತ್ತಿರುವುದು ಇತ್ತೀಚೆಗೆ ಆಗಿದೆ. ಪತ್ರಿಕೆಯ ಮುಖ್ಯೋದ್ದೇಶಗಳು ಮೂರು:

೧. ಜನಕ್ಕೆ ಇಷ್ಟವೆನಿಸುವ ಅಥವಾ ಅವರ ಹಿತಕ್ಕೆ ಬೇಕಾದ ಲೋಕವಾರ್ತೆಗಳನ್ನು ಸಂಗ್ರಹಿಸಿ ಪ್ರಸರಿಸುವುದು.

೨. ಸಾರ್ವಜನಿಕ ಪ್ರಶ್ನೆಗಳ ಚರ್ಚೆಯಲ್ಲಿ ಸರ್ಕಾರದ ಕಾರ್ಯಕ್ರಮ ನೀತಿ-ನಿಯಮಗಳನ್ನು ವಿಮರ್ಶೆಗು ಜನಾಭಿಪ್ರಾಯದ ಶೇಖರಣೆಗೂ ವಾಹಕವಾಗುವುದು.

೩. ಜನಕ್ಕೆ ಉಪಯುಕ್ತವಾದ ವಿವಿಧ ಜ್ಞಾನವನ್ನು, ಮನೋರಂಜಕವಾದ ಬಗೆ ಬಗ್ಗೆಯ ಸಾಹಿತ್ಯವನ್ನು ಪ್ರಚಾರ ಪಡಿಸುವುದು.

ಪತ್ರಿಕೆಗಳು ಜನರಿಗೆ ಅವಶ್ಯಕತೆ ಇರುವ ಸುದ್ದಿಯನ್ನು ತಿಳಿಸುವ ಮೂಲಕ ಜ್ಞಾನದ ಅರಿವನ್ನ ತಿಳಿಸುವ ಪ್ರಯತ್ನ ಮಾಡಬೇಕು ಮತ್ತು ಕೆಲವು ವಿಚಾರಗಳು ಸಾರ್ವಜನಿಕವಾಗಿ ಕಾನೂನಿನ ಬಗ್ಗೆ ತಿಳಿವಳಿಕೆ ಮೂಡಿಸುವಂತೆ ಚರ್ಚಿಸಬೇಕು. ಎಲ್ಲ ಮನರಂಜನೆಯಿಂದ ಹಿಡಿದು, ಸಾಹಿತ್ಯೇತ್ತರ ವಲಯಗಳಲ್ಲಿಯೂ ಭಾಷೆಯನ್ನು ಪ್ರಚಾರ ಮಾಡುವ ಮೂಲಕ ಬೆಳೆಸಬೇಕು.

# ಪತ್ರಿಕೆಯ ಹುಟ್ಟು ಮತ್ತು ಬೆಳವಣಿಗೆ

ಮೊದಲು ಮಾನವ ಅಂಗ ಚೇಷ್ಟೆ ಮತ್ತು ವಸ್ತುಗಳ ಮುಖಾಂತರ ಸಂಪರ್ಕಿಸತೊಡಗಿದ ನಂತರ ಭಾಷೆ ಸೃಷ್ಟಿಗೊಂಡಾಗ ಅದನ್ನು ತನ್ನ ಭಾವನೆಗಳನ್ನು ಹಂಚಿಕೊಳ್ಳಲು ಸಂವಹನ ಮಾಧ್ಯಮವಾಗಿ ಬಳಸಿಕೊಂಡ ನಂತರ ಮಾತಿನ ಮೂಲಕ ಲಿಪಿ ಕಂಡುಕೊಂಡ ಹೀಗೆ ಹಂತ ಹಂತವಾಗಿ ಕಾಲ ಬದಲಾವಣೆ ಹೊಂದಿದಂತೆ ಬೌದ್ಧಿಕ ಬೆಳವಣಿಗೆ, ಔದ್ಯೋಗಿಕ ಕ್ರಾಂತಿಯ ಫಲ ಆಧುನಿಕ ಯಂತ್ರಗಳ ಅವಿಷ್ಕಾರಗಳನ್ನು ಬೆಳೆಸಿಕೊಂಡ ಇಂದಿನ ಮುದ್ರಣ ಯಂತ್ರಗಳ ಪೂರ್ವದಲ್ಲಿ ಕಲ್ಲುಚ್ಚನ್ನು ಬಳಸುತ್ತಿದ್ದರು.

ಎಲ್ಲ ದೇಶಗಳಲ್ಲು ಅಧಿಕಾರಿಗಳು, ಕವಿಗಳು ತಮ್ಮ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸಲು ಬಟ್ಟೆ, ಕಲ್ಲು, ಲೋಹ, ಕಾಗದಗಳನ್ನು, ತಾಳೆಗರಿಗಳನ್ನು ಬರಹದ ಮಾಧ್ಯಮವಾಗಿ ಬಳಸುತ್ತಿದ್ದರೆಂಬುದು ಎಲ್ಲರಿಗೂ ತಿಳಿದ ಸಂಗತಿಯೇ. ಆಧುನಿಕ ಯಂತ್ರಗಳ ಆವಿಷ್ಕಾರವು ಬರವಣಿಗೆಯ ಅನೇಕ ಸಾಧ್ಯತೆಗಳನ್ನು ತೆರೆದಿಟ್ಟಿತು. ಶ್ರಮವನ್ನು, ವೆಚ್ಚವನ್ನು ಕುಗ್ಗಿಸಿ, ಅತಿ ಕಡಿಮೆ ಅವಧಿಯಲ್ಲಿ ಹೆಚ್ಚು ಜನಗಳಿಗೆ ಸುದ್ದಿ ಕಳುಹಿಸುವ ಒಂದು ಕ್ರಾಂತಿಯೇ ಯಂತ್ರಗಳಿಂದ ಆಯಿತು. ಇವುಗಳಲ್ಲಿ ಮೊದಲ ಸ್ಥಾನವನ್ನು 'ಮುದ್ರಣ' ಪಡೆದುಕೊಳ್ಳುತ್ತದೆ. ಕಾಗದ, ಬಟ್ಟೆ, ಲೋಹಗಳ ಮೇಲೆ ಮುದ್ರಣ ಮಾಡಬಹುದಾದರು 'ಕ್ರಾಂತಿ'ಯ ದೃಷ್ಟಿಯಿಂದ ಕಾಗದದ ಮುದ್ರಣ ಪ್ರಮುಖವಾಗಿದೆ.

ಚೀನಾ ದೇಶ ಕ್ರಿ.ಶ. ೭೯೩ ರಲ್ಲಿ ಕಾಗದ ಸಿದ್ಧಗೊಳಿಸಿ ಕ್ರಿ.ಶ. ೮೬೮ ರಲ್ಲಿ 'ಹಿರಾಕ ಸೂತ್ರ' ಎಂಬ ಕೃತಿ ಅಚ್ಚು ಮಾಡಿದರು. ಇದು ಚೀನಾ ದೇಶವು ಪ್ರಪಂಚದ ಮುದ್ರಣ ಕಲೆಗೆ ನೀಡಿರುವ ಪ್ರಥಮ ಕಾಣಿಕೆ. ಈ ದಿಸೆಯಲ್ಲಿ ಸಂಶೋಧನೆಗಳು ಮುಂದುವರೆದು ಮುದ್ರಣ ಯಂತ್ರ ಅಚ್ಚಿನಮೊಳೆಗಳು ಸಂಶೋಧಿಸಲ್ಪಟ್ಟವು. ೧೫ನೇ ಶತಮಾನದ ಕೊನೆಗೆ ಇಂಗ್ಲೆಡಿನ 'ವೆಲ್ ಪೆಲ್'ದಲ್ಲಿ ಆಂಗ್ಲ ಭಾಷೆಯ ಮುದ್ರಣಾಲಯ ಸ್ಥಾಪನೆಯಾಯಿತು. ಅತೀ ಶೀಘ್ರವಾಗಿ ಈ ಯಂತ್ರ ಪ್ರಪಂಚದ ಅನೇಕ ದೇಶಗಳಿಗೆ ರವಾನೆಯಾಯಿತು. ಕ್ರಿ.ಶ. ೧೬೧೫ ರಲ್ಲಿ ಪ್ರಕಟವಾದ 'ಜರ್ಮನ್ ಪತ್ರಿಕೆ' ಪ್ರಪಂಚದ ಮೊದಲ ಪತ್ರಿಕೆ ಔದ್ಯೋಗಿಕ ಕ್ರಾಂತಿ ಪರಿಣಾಮದಿಂದ ಪತ್ರಿಕೆಯ ಮಾರುಕಟ್ಟೆ ದೊರೆಯಿತು. ಕ್ರಿ.ಶ. ೧೯೩೦ ರಲ್ಲಿ ಅಮೆರಿಕಾದಲ್ಲಿ ಹುಟ್ಟಿಕೊಂಡ ಡೆನ್ನಿ ಹೆಸರಿನ ಪತ್ರಿಕೆ ನಿಜವಾದ ಪ್ರಥಮ ಸಮೂಹ ಮಾಧ್ಯಮದ ಪತ್ರಿಕೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಭಾರತದಲ್ಲಿ ಕ್ರಿಶ್ಚಿಯನ್ ಮಿಶನರಿಗಳ ಪ್ರಯತ್ನದ ಫಲವಾಗಿ ಪಾಶ್ಚಾತ್ಯ ದೇಶಗಳಿಂದ ನಮ್ಮ ದೇಶಕ್ಕೆ ಮುದ್ರಣ ಯಂತ್ರಗಳು ಹೆಜ್ಜೆ ಇಟ್ಟವು. ಕ್ರಿ.ಶ. ೧೫೫೬ ರಲ್ಲಿ ಗೋವಾದಲ್ಲಿ ಮುದ್ರಣ ಯಂತ್ರ ಸ್ಥಾಪಿಸಲ್ಪಟ್ಟಿತು. ದೇಶದ ಪ್ರಥಮ ಮುದ್ರಣ ಯಂತ್ರ ಬರೀ ಕ್ರಿಶ್ಚಿಯನ್ನರ ಧರ್ಮೋಪದೇಶದ ಬೈಬಲ್ ಧರ್ಮ ಗ್ರಂಥಗಳು ಮಾತ್ರ ಅಚ್ಚಾಗುತ್ತಿದ್ದವು. ಕ್ರಿ.ಶ. ೧೭೮೦

ಜನವರಿ ೨೯ ರಂದು ಜೇಮ್ಸ್ ಆಗಸ್ಟ್‌ಸ್ ಹಿಕ್ಕಿ ಎಂಬ ಆಂಗ್ಲವಿದ್ವಾಂಸ ಕಲ್ಕತ್ತದಲ್ಲಿ 'ದಿ ಬೆಂಗಾಲ್ ಗೆಜೆಟ್ಟ್' (The Bengal gazette) ಎಂಬ ಪತ್ರಿಕೆ ಮುದ್ರಿಸಿ ಪ್ರಕಟಿಸಿದ. ಇದು ಭಾರತದ ಪ್ರಥಮ ಪತ್ರಿಕೆ, ಅನೇಕ ತೊಂದರೆಗಳ ಮಧ್ಯದಲ್ಲಿಯೂ ಜೇಮ್ಸ್ ಆಗಸ್ಟಸ್ ಹಿಕ್ಕಿ ಅತ್ಯಂತ ಧೈರ್ಯದಿಂದ 'ದಿ ಬೆಂಗಾಲ್ ಗೆಜೆಟ್' ಎಂಬ ತನ್ನ ಪತ್ರಿಕೆಯನ್ನು ಮುಂದುವರಿಸಿದ. ಭಾರತೀಯ ಪತ್ರಿಕೋದ್ಯಮಗಳಿಗೆ ಮಾರ್ಗದರ್ಶಿಯಾದ್ದರಿಂದ ಇವನನ್ನು 'ಭಾರತೀಯ ಪತ್ರಿಕೋದ್ಯಮದ ಪಿತಾಮಹ' ಎಂದು ಕರೆಯಲಾಗುತ್ತದೆ.

ಭಾರತೀಯ ಪತ್ರಿಕೆಗಳನ್ನು ಹೊರಡಿಸಿ ಪತ್ರಿಕಾ ಪ್ರಪಂಚಕ್ಕೆ ಭಾರತದಲ್ಲಿ ಭದ್ರವಾದ ನೆಲೆಯನ್ನು ಹಾಕಿದವರು ರಾಜಾ ರಾಮ್ ಮೋಹನ್‌ರಾಯ್ ಮತ್ತು ಜೋಷಿ ಇವರು ಅವಿಸ್ಮರಣೀಯರು. ಕನ್ನಡ ನಾಡಿನಲ್ಲಿ ಪತ್ರಿಕೆ ಆರಂಭ ಕ್ರಿ.ಶ. ೧೮೨೭ರಲ್ಲಿ. ಬಳ್ಳಾರಿಯಲ್ಲಿ ಮೊದಲ ಮುದ್ರಣ ಯಂತ್ರ ಸ್ಥಾಪನೆ, ನಂತರ ಬೆಂಗಳೂರು, ಮೈಸೂರು, ಮಂಗಳೂರು ಮತ್ತು ಬೆಳಗಾವಿಯಲ್ಲಿ ಸ್ಥಾಪನೆಯಾಯಿತು. ಕ್ರಿ.ಶ. ೧೮೪೩ ರಲ್ಲಿ ಕನ್ನಡದ ಮೊಟ್ಟಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' ಪ್ರಕಟಗೊಂಡಿತು.

ಕನ್ನಡ ಪತ್ರಿಕೋದ್ಯಮದಲ್ಲಿ ಪ್ರಾರಂಭದ ದಿನಗಳಲ್ಲಿ ನೇತಾರರಾಗಿ ಕಾರ್ಯನಿರ್ವಹಿಸಿದವರು ಶ್ರೀ ಎಂ. ವೆಂಕಟಕೃಷ್ಣಯ್ಯ, ಡಿ.ವಿ.ಜಿ., ತಿರುಮಲೆ ತಾತಾಚಾರ್ಯ, ಸಿದ್ದವನಹಳ್ಳಿ ಕೃಷ್ಣಶರ್ಮ ಮುಂತಾದವರು.

| | | |
|---|---|---|
| ಕ್ರಿ.ಶ. ೧೯೨೬ ರಲ್ಲಿ | ತಾಯಿ ನಾಡು | ಮೈಸೂರು |
| ಕ್ರಿ.ಶ. ೧೯೩೧ ರಲ್ಲಿ | ಪ್ರಜಾಮತ | ಮೈಸೂರು |
| ಕ್ರಿ.ಶ. ೧೯೩೩ ರಲ್ಲಿ | ಸಂಯುಕ್ತ ಕರ್ನಾಟಕ | ಹುಬ್ಬಳ್ಳಿ |
| ಕ್ರಿ.ಶ. ೧೯೩೯ ರಲ್ಲಿ | ಸಂಯುಕ್ತ ಕರ್ನಾಟಕ | ಬೆಂಗಳೂರು |
| ಕ್ರಿ.ಶ. ೧೯೪೧ ರಲ್ಲಿ | ನವಭಾರತ | ಮಂಗಳೂರು |
| ಕ್ರಿ.ಶ. ೧೯೪೮ ರಲ್ಲಿ | ಡೆಕ್ಕನ್ ಹೆರಾಲ್ಡ್, | |
| | ಪ್ರಜಾವಾಣಿ | |
| ಕ್ರಿ.ಶ. ೧೯೬೫ ರಲ್ಲಿ | ಸುಧಾ ಪತ್ರಿಕೆ | |
| ಕ್ರಿ.ಶ. ೧೯೬೮ ರಲ್ಲಿ | ಕನ್ನಡ ಪ್ರಭ ಪತ್ರಿಕೆ | |
| ಕ್ರಿ.ಶ. ೧೯೭೧ ರಲ್ಲಿ | ಉದಯವಾಣಿ ಪತ್ರಿಕೆ ......... | ಇತ್ಯಾದಿಯಾಗಿ, |

**ಶೀರ್ಷಿಕೆ ಪತ್ರಿಕೆಯ ಪ್ರಕಾರಗಳು:**

೧) ದೈನಿಕ ಪತ್ರಿಕೆ
- ಪ್ರತಿದಿನ ಪ್ರಕಟವಾಗುವ ಪತ್ರಿಕೆ

೨) ವಾರ ಪತ್ರಿಕೆ
- ಪ್ರತಿ ವಾರಕ್ಕೊಮ್ಮೆ ಪ್ರಕಟವಾಗುವುದು.

೩) ಪಾಕ್ಷಿಕ ಪತ್ರಿಕೆ
- ಪ್ರತಿ ಹದಿನೈದು ದಿನಗಳಿಗೊಮ್ಮೆ ಪ್ರಕಟವಾಗುವ ಪತ್ರಿಕೆ

೪) ಮಾಸಿಕ ಪತ್ರಿಕೆ
- ತಿಂಗಳಿಗೊಮ್ಮೆ ಪ್ರಕಟಗೊಳ್ಳುವ ಪತ್ರಿಕೆ

೫) ದ್ವೈ ಮಾಸಿಕ ಪತ್ರಿಕೆ
- ಪ್ರತಿ ಎರಡು ತಿಂಗಳಿಗೊಮ್ಮೆ ಪ್ರಕಟವಾಗುವುದು.

೬) ತ್ರೈಮಾಸಿಕ ಪತ್ರಿಕೆ
- ಮೂರು ತಿಂಗಳಿಗೊಂದು ಬಾರಿ ಪ್ರಕಟವಾಗುವ ಪತ್ರಿಕೆ

೭) ಅರ್ಧವಾರ್ಷಿಕ ಪತ್ರಿಕೆ
- ಪ್ರತಿ ಆರು ತಿಂಗಳಿಗೊಂದು ಬಾರಿ ಪ್ರಕಟಗೊಳ್ಳುವುದು.

೮) ವಾರ್ಷಿಕ ಪತ್ರಿಕೆ
- ವರ್ಷಕ್ಕೆ ಒಂದು ಬಾರಿ ಪ್ರಕಟವಾಗುವ ಪತ್ರಿಕೆ.

ಪ್ರಕಟವಾಗುವ ದಿನಗಳ ಆಧಾರದ ಮೇಲೆ ಪತ್ರಿಕೆಗಳನ್ನು ಹೆಸರಿಸಿದಂತೆಯೇ ಅವುಗಳ ವಸ್ತುವನ್ನು ಆಧರಿಸಿ ಅವುಗಳನ್ನು ವಿಂಗಡಿಸಬಹುದು:–

೧. ಸಾಮಾಜಿಕ ವಿಷಯಕ್ಕೆ ಸಂಬಂಧಿಸಿದ ಪತ್ರಿಕೆಗಳು:
ಸುಧಾ, ತರಂಗ, ಪ್ರಜಾಮತ, ಮಂಗಳ, ಸಂಗಾತಿ, ವನಿತಾ, ಕರ್ಮವೀರ ...... ಇತ್ಯಾದಿ

೨. ರಾಜಕೀಯ ವಿಷಯಕ್ಕೆ ಸಂಬಂಧಿಸಿದ ಪತ್ರಿಕೆಗಳು:
ಸುದ್ಧಿ ಸಂಗಾತಿ, ಪ್ರಪಂಚ, ಕೆಂಬಾವುಟ, ಐಕ್ಯರಂಗ, ಸಂಕೇತ, ಹಾಯ್ ಬೆಂಗಳೂರು, ಅಗ್ನಿ ........... ಇತ್ಯಾದಿ.

೩. ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಪತ್ರಿಕೆಗಳು:
ಲಿಂಗಾಯಿತ ಕಲ್ಯಾಣಕಿರಣ, ಬಸವ ಮಾರ್ಗ, ಮಾಮಿಡಿ, ಲಿಂಗನುಡಿ, ವಿವೇಕವಾಣಿ, ವಿವೇಕ ಸಂಪದ, ವಾಲ್ಮೀಕಿ ವಾಣಿ, ಮಂಜವಾಣಿ, ಓಶೋವಚನ, ಆಧ್ಯಾತ್ಮ ಪ್ರಕಾಶ.

೪. ಸಾಹಿತ್ಯಕ ವಿಷಯಕ್ಕೆ ಸಂಬಂಧಿಸಿದ ಪತ್ರಿಕೆಗಳು:
ಪ್ರಬುದ್ಧ ಕರ್ನಾಟಕ, ಸಂಕ್ರಮಣ, ಋಜುವಾತು, ಶೂದ್ರ, ದೇಶ ಕಾಲ, ಸಂಚಯ, ಅನ್ವೇಷಣೆ, ಸಂವಾದ ............ ಇತ್ಯಾದಿ.

೫. ಸಿನಿಮಾ ಪತ್ರಿಕೆಗಳು:
ರೂಪಾತಾರ / ಅರಗಿಣಿ, ಸೂರ್ಯ ............ ಇತ್ಯಾದಿ.

೬. ಇತರೆ :– ಪೋಲಿಸ್ ಸ್ಟೋರಿ, ಕ್ರೈಂ ನ್ಯೂಸ್, ಕ್ರಿಮಿನಲ್ ಡೈರಿ...... ಇತ್ಯಾದಿ.

ಹೀಗೆ ಎಲ್ಲಾ ರಂಗಗಳಲ್ಲಿಯೂ ಪತ್ರಿಕೆಗಳ ಮುದ್ರಣ ಮತ್ತು ಪ್ರಸಾರ ಗೋಚರಿಸುತ್ತದೆ.

***ಪತ್ರಿಕಾ ಲೋಕದ ಕಾರ್ಯಕರ್ತರು:***

- ವರದಿಗಾರರು
- ವಿಶೇಷ ವರದಿಗಾರರು
- ವಿಶೇಷ ಲೇಖಕರು
- ಸಾಹಿತ್ಯ ವಿಮರ್ಶಕರು
- ಸಂಗೀತ ವಿಮರ್ಶಕರು
- ನಾಟಕ ವಿಮರ್ಶಕರು
- ಚಿತ್ರಶಿಲ್ಪ ವಿಮರ್ಶಕರು
- ಛಾಯಾ ಚಿತ್ರಗಾರರು
- ಉಪ ಸಂಪಾದಕರು
- ಸಂಪಾದಕರು

***ಕಾರ್ಯಕರ್ತರ ಕರ್ತವ್ಯಗಳು:***

೧. ಸುದ್ದಿ ಸ್ವೀಕಾರ

೨. ವಿಶ್ಲೇಷಣೆ

೩. ಜೋಡಣೆ ಮತ್ತು ಅಂತಿಮ ರೂಪ ನೀಡುವಿಕೆ

ಈ ರೀತಿ ಪತ್ರಿಕಾ ಮಾಧ್ಯಮದ ಉಗಮ ಮತ್ತು ವಿಕಾಸವನ್ನು ನಾವು ನೋಡುತ್ತೇವೆ. ಆಧುನಿಕ ಯುಗದಲ್ಲಿ ಪತ್ರಿಕೋದ್ಯಮ ಮಹತ್ವದ ಪಾತ್ರವನ್ನು ವಹಿಸುತ್ತದೆ. ಹಾಗೆಯೇ ತನ್ನ ಕಾರ್ಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಸಮಾಜದಲ್ಲಿ ಸಂವಹನ ಮಾಧ್ಯಮವಾಗಿ ಬೆಳೆದಿದೆ. ಜೊತೆಗೆ ಭಾಷೆಯನ್ನು ಹೆಚ್ಚಾಗಿ ದುಡಿಸಿಕೊಳ್ಳುವ ಕ್ಷೇತ್ರ ಇದಾಗಿದೆ.

**ಆಕಾಶವಾಣಿ:**

ಕ್ರಿ.ಶ. ೧೮೯೪ರಲ್ಲಿ ಮಾರ್ಕೋನಿ ರೇಡಿಯೋ ಶೋಧನೆಯಲ್ಲಿ ತೊಡಗಿದ್ದನು. ಈ ಹಿಂದೆ ಶೋಧ ಮಾಡಿದ್ದ, ಹರ್ಟ್ಸನ್ನನ ತರಂಗಗಳನ್ನು ಕುರಿತು ಅಧ್ಯಯನ ಕೈಗೊಂಡನು. ರಷ್ಯಾದ ಖ್ಯಾತ ವಿಜ್ಞಾನಿಗಳು ಸರ್. ಅಲಿವರ್ ಲಾಜ್ ಮತ್ತು ಎ.ಎಸ್. ಪಾಪೋಟ್ ಅವರು ಹರ್ಟ್ಸನ್ನನ ವೇವ್ಸ್ ಬಗ್ಗೆ ಅಭ್ಯಾಸಕ್ಕೆ ತೊಡಗಿದ್ದರು, ಆದರೆ ಇವರಲ್ಲಿ ಕೊನೆಗೆ ಜಯ ಸಿಕ್ಕಿದ್ದು ಮಾತ್ರ ಮಾರ್ಕೋನಿಗೆ ಎಲ್ಲರೂ ಮಾರ್ಕೋನಿಯನ್ನು ಆಕಾಶವಾಣಿಯ ಸಂಶೋಧಕನೆಂದು ಸರ್ವಾನುಮತದಿಂದ ಒಪ್ಪಿಕೊಂಡರು. ಕ್ರಿ.ಶ. ೧೮೯೭ರಲ್ಲಿ ಮಾರ್ಕೋನಿ ತಯಾರಿಸಿದ್ದ ಆಕಾಶವಾಣಿ ಮಾಧ್ಯಮದಿಂದ ಸಂದೇಶವನ್ನು ಕಳುಹಿಸಿದನು. ಅದು ಸುಮಾರು ೨೯ ಕಿ.ಮೀ.ಗಳ ಅಂತರವನ್ನು ಉಪಕ್ರಮಿಸಿತು.

ಮಾರ್ಕೋನಿ ತನ್ನದೇ ಆದ ಒಂದು ರಿಸೀವರ್ ತಯಾರಿಸಿದನು. ಅದನ್ನು 'ಕೋಹಿರರ್' ಎಂದು ಹೆಸರಿಸಲಾಯಿತು. ಕಬ್ಬಿಣದ ಲೋಹದಿಂದ ಅದನ್ನು ತಯಾರಿಸಲಾಗಿತ್ತು. ಕೆಲವು ವರ್ಷಗಳಲ್ಲಿಯೇ ಈ ಆಕಾಶವಾಣಿಯು ತನ್ನ ಪೂರ್ಣರೂಪವನ್ನು ಪಡೆದುಕೊಳ್ಳುವಂತಾಯಿತು. ಕ್ರಿ.ಶ. ೧೯೦೬ ರಲ್ಲಿ ಮೊಟ್ಟಮೊದಲನೆಯ ಭಾಷಣದ ಪ್ರಸಾರ ಕಾರ್ಯವನ್ನು ಅಮೆರಿಕಾದಲ್ಲಿ ಮತ್ತು ಜರ್ಮನಿಯಲ್ಲಿ ಮಾಡಲಾಯಿತು. ಕ್ರಿ.ಶ. ೧೯೨೧ ರಲ್ಲಿ ಅಮೆರಿಕಾದಲ್ಲಿ ಮೊಟ್ಟ ಮೊದಲ ಪ್ರಸಾರ ಕೇಂದ್ರ ಸ್ಥಾಪಿಸಲಾಯಿತು.

ಕ್ರಿ.ಶ. ೧೯೨೨ ರಲ್ಲಿ ಬಿ.ಬಿ.ಸಿ. ಲಂಡನ್ ಕೇಂದ್ರವು ವ್ಯಾಪಾರ ಸಂಸ್ಥೆಯಾಗಿ ತಲೆ ಎತ್ತಿತ್ತು. ಭಾರತ ದೇಶದಲ್ಲಿ ಕ್ರಿ.ಶ. ೧೯೨೭ರ ಜುಲೈ ೨೩ ರಂದು ಆಕಾಶವಾಣಿಯ ಪ್ರಸಾರದ ಕಾರ್ಯ ಪ್ರಾರಂಭವಾಯಿತು. ಕ್ರಿ.ಶ. ೧೯೨೬ರಲ್ಲಿ Indian Broadcosting Company ಮೈದಾಳಿತು.

ಕ್ರಿ.ಶ. ೧೯೨೭ರಲ್ಲಿ ಜುಲೈ ೨೩ರಂದು ಮುಂಬೈನಲ್ಲಿ ಒಂದು ಕೇಂದ್ರ ಸ್ಥಾಪಿತವಾಯಿತು. ಕ್ರಿ.ಶ. ೧೯೨೭ರ ಆಗಸ್ಟ್ ೨೬ರಂದು ಕಲ್ಕತ್ತಾದಲ್ಲಿ ಒಂದು ರೇಡಿಯೋ ಕೇಂದ್ರ ಆರಂಭವಾಯಿತು. ೧೯೩೬ ರಲ್ಲಿ AIR ಎಂಬ ನಾಮಕರಣವಾಯಿತು.

ಕರ್ನಾಟಕದಲ್ಲಿ ಕ್ರಿ.ಶ. ೧೯೫೦ ಜನವರಿ ೮ ರಂದು ಧಾರವಾಡ ಆಕಾಶವಾಣಿ ಕೇಂದ್ರ ಸ್ಥಾಪನೆಯಾಯಿತು. ಕ್ರಿ.ಶ. ೧೯೫೫ ರ ನವೆಂಬರ್ ೭ ರಂದು ಬೆಂಗಳೂರು ಆಕಾಶವಾಣಿ ಕೇಂದ್ರ ಸ್ಥಾಪನೆಯಾಯಿತು. ಅಂದಿನಿಂದ ಕನ್ನಡದಲ್ಲಿ ಕಾರ್ಯಕ್ರಮ ಪ್ರಸಾರವಾಗಿ ಸಮಾಜದ ಸಂವಹನೆಗೆ ತೊಡಗಿತು. ಈ ಸಂವಹನದ ಬಗೆಗೆ ಮುಂದೆ ಚರ್ಚಿಸಲಾಗಿದೆ.

**ಆಕಾಶವಾಣಿ ಮತ್ತು ಸಂವಹನ:**

ಸಂವಹನ ವಿಧಾನಗಳಲ್ಲಿ ಮುಖಾಮುಖಿ ಸಂಪರ್ಕವೇ ಅತ್ಯಂತ ಪರಿಣಾಮಕಾರಿ ವಿಧಾನ. ಕೇಳುವ ವ್ಯಕ್ತಿ ನಮ್ಮೆದುರಿಗೇ ಇದ್ದು ನಮ್ಮನ್ನು ನೋಡುತ್ತಲೇ ನಮ್ಮ ಮಾತನ್ನು ಕೇಳಿಸಿಕೊಳ್ಳುತ್ತಲೂ ಇರುತ್ತಾನೆ. ನಾವು ಬಳಸುವ ಅಂಗಾಂಗಳ ಹಾವಭಾವಗಳ ಜೊತೆಗೆ ನಾವು ತೋರಿಸುವ ಚಿತ್ರ ವಸ್ತುಗಳನ್ನು ನೋಡಬಲ್ಲವನಾಗಿರುತ್ತಾನೆ. ಅಂದರೆ ಆತನ ಜ್ಞಾನೇಂದ್ರಿಯಗಳ ಪೈಕಿ ಅತ್ಯಂತ ಪ್ರಮುಖವಾದ ಕಣ್ಣು ಮತ್ತು ಕಿವಿ ಸಂಯುಕ್ತವಾಗಿ ಸಂವಹನವನ್ನು ಸ್ವೀಕರಿಸುವುದರಲ್ಲಿ ತೊಡಗಿರುತ್ತವೆ. ಹೀಗಾಗಿ ಸಂವಹನ ಕ್ರಿಯೆ ಹೆಚ್ಚು ಪರಿಣಾಮಕಾರಿ ಆಗುತ್ತದೆ.

ರೇಡಿಯೋ ಮೂಲಕ ನಡೆಯುವ ಸಂವಹನದಲ್ಲಿ ಈ ಪರಿಸ್ಥಿತಿಯ ಅರ್ಧದಷ್ಟಾದರೂ ಅಂಶಗಳು ಬಳಕೆಯಾಗುತ್ತವೆ. ವ್ಯಕ್ತಿ ಹೇಳುವ ವ್ಯಕ್ತಿಗೆ ಕಾಣಿಸುವುದಿಲ್ಲ ಎಂಬ ಪ್ರಮುಖವಾದ ಕೊರತೆ ಇದೆ. ಆದರೂ ಇತರ ಕೆಲವು ತಂತ್ರಗಳ ಮೂಲಕ ಅನುಭವದಿಂದ ಈ ಕೊರತೆಯನ್ನು ನೀಗಬಹುದು. ಜೊತೆಗೆ ಸಂಕಲನದ ಸ್ಪೆಷಲ್ ಎಫೆಕ್ಟ್ ಧ್ವನಿ ವಿಶೇಷ, ಸಂಗೀತ ಇತ್ಯಾದಿಗಳ ವಿಶಿಷ್ಟ ಬಳಕೆಯಿಂದಾಗಿ ಧ್ವನಿ ದೃಶ್ಯ ಎರಡರ ಸತ್ವವೂ ಹೆಚ್ಚಿ ಸುಲಭವಾಗಿ ಮುಖಾಮುಖಿ ಸಂವಹನಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಬಲ್ಲದು.

ರೇಡಿಯೋ ಸಂವಹನದಲ್ಲಿ ದೃಶ್ಯವಿರುವುದಿಲ್ಲ. ಧ್ವನಿ ಮಾತ್ರ ಇರುತ್ತದೆ. ಆಕಾಶವಾಣಿಯ ಮುಖ್ಯವಾಗಿ 'ಶ್ರವ್ಯ' (ಕೇಳುವ) ಮಾಧ್ಯಮ ವಾಸ್ತವ ದೃಶ್ಯ ಇಲ್ಲದಿರುವುದು. ಮಾಧ್ಯಮದ ದೌರ್ಬಲ್ಯ ಎಂಬುದು ಬಹಳ ಮೇಲ್ನೋಟದ ಹಾಗೂ ಟೆಲಿವಿಷನ್‌ನೊಂದಿಗೆ ಹೋಲಿಸಿದ ಮಾತಾಗಿ ಬಿಡುತ್ತದೆ ಅಷ್ಟೇ. ಧ್ವನಿಯ ಹಲವಾರು ಸಾಧ್ಯತೆಗಳ ಸಮರ್ಥ ಬಳಕೆಯಿಂದಾಗಿ ರೇಡಿಯೋ ಮಾಧ್ಯಮವೂ ಅತ್ಯಂತ ಜೀವಂತ ನೈಜ ಮಾಧ್ಯಮವಾಗಬಲ್ಲದು. ಟೆಲಿವಿಷನ್‌ನಲ್ಲಿ ದೃಶ್ಯ, ಟಿ.ವಿ. ಪರದೆಯ ಮೇಲೆ ಮೂಡಬಹುದು. ಆದರೆ ರೇಡಿಯೋ ಮೂಲಕ ಪ್ರಸಾರವಾದ ಧ್ವನಿ ಕೇಳುಗರ ಮನಸ್ಸಿನ ಪರದೆಯ ಮೇಲೆ ಅದ್ಭುತ ರಮ್ಯ ದೃಶ್ಯಗಳನ್ನು ಸೃಷ್ಟಿಸಿದಾಗ ಸಂವಹನ ಪರಿಣಾಮಕಾರಿಯಾಗಿರುತ್ತದೆ.

ಕೆಲವು ಕಾರಣಗಳಿಗಾಗಿ ರೇಡಿಯೋ ಸಂವಹನ ಟೆಲಿವಿಷನ್ ಸಂವಹನಕ್ಕಿಂತ ಹೆಚ್ಚು ಸ್ವಾಗತಾರ್ಹವೂ ಆಗಿಬಿಡುತ್ತದೆ. ರೇಡಿಯೋ ತಂತ್ರಜ್ಞಾನ, ಟಿ.ವಿ. ತಂತ್ರಜ್ಞಾನಕ್ಕಿಂತ ಸರಳ. ಅದಕ್ಕೊಂದೇ ಅದರ ಸ್ಥಾಪನೆ, ನಿರ್ವಹಣೆಗೆ ಕಡಿಮೆ ಖರ್ಚಾಗುತ್ತದೆ. ರೇಡಿಯೋ ತಾಂತ್ರಿಕತೆಯ ವೈಶಿಷ್ಟ್ಯದಿಂದಾಗಿ ಅದು ಅತಿದೂರಗಳನ್ನು ತಲುಪಬಲ್ಲದು. ರೇಡಿಯೋ ಪ್ರಸಾರವನ್ನು ಮನೆಗಳಲ್ಲಿ ಪಡೆಯುವ ಸಾಧನವಾದ ರೇಡಿಯೋ 'ಟ್ರಾನ್‌ಸಿಸ್ಟರ್' ಟಿ.ವಿ. ಗಿಂತ ತುಂಬಾ ಕಡಿಮೆ ಬೆಲೆ ಹಾಗೆಯೇ ಸುಲಭವಾಗಿ ಎಲ್ಲೆಂದರಲ್ಲಿಗೆ ಎತ್ತಿಕೊಂಡು ಓಡಾಡಲು ಸಾಧ್ಯವಿರುವಂತಹುದಾಗಿದೆ. ಅದರ ಮೇಲೆ ಟಿ.ವಿ.ಯನ್ನು ನೋಡಲು ನಾವು ಎಲ್ಲ Mobile T.V. ಮತ್ತು Mobile Phone ಕೆಲಸವನ್ನು ಬಿಟ್ಟು ಕುಳಿತುಕೊಳ್ಳಬೇಕು. ರೇಡಿಯೋಕ್ಕಾದರೆ ಹಾಗಿಲ್ಲ. ಇನ್ನೇನೋ ಕೆಲಸ ಮಾಡುತ್ತಲೇ ಇದನ್ನು ಕೇಳಿಸಿಕೊಳ್ಳಬಹುದು. ರೇಡಿಯೋ ನಮ್ಮಂಥ ದೇಶದಲ್ಲಿ ಸಾಮೂಹಿಕ ಸಂವಹನ ಶಿಕ್ಷಣಕ್ಕಾಗಿ ಅತ್ಯಂತ ಸೂಕ್ತ ಮಾಧ್ಯಮ. ಅದರ ಹೊರತಾಗಿ ಟಿ.ವಿ.ಗೇ ಪ್ರಾಶಸ್ತ್ಯ ಸಿಕ್ಕಿರುವುದು ಇತ್ತೀಚಿನ ದಿನಗಳಲ್ಲಿ ಗಮನಾರ್ಹ.

ಎಲೆಕ್ಟ್ರಾನಿಕ್ ಮಾಧ್ಯಮ. ಅದರ ಹೊರತಾಗಿ ಟಿ.ವಿ.ಗೇ ಪ್ರಾಶಸ್ತ್ಯ ಸಿಕ್ಕಿರುವುದು ಇತ್ತೀಚಿನ ದಿನಗಳಲ್ಲಿ ಗಮನಾರ್ಹ.

ಎಲೆಕ್ಟ್ರಾನಿಕ್ ಮಾಧ್ಯಮಗಳಾದ ರೇಡಿಯೋ ಮತ್ತು ಟೆಲಿವಿಷನ್‌ಗಳಲ್ಲಿ ಅಭಿವೃದ್ಧಿ ಹೊಂದಿದ್ದು, ಅಂತೆಯೆ ಭಾರತಕ್ಕೆ ಬಂದದ್ದು ಮೊದಲಿಗೆ ರೇಡಿಯೋನೆ. ಅಮೆರಿಕಾ, ಇಂಗ್ಲೆಂಡ್‌ಗಳಲ್ಲಿ ಮೊತ್ತಮೊದಲು ರೇಡಿಯೋ ಪ್ರಸಾರ ಸಾಧ್ಯವಾದ ಒಂದೆರಡು ವರ್ಷಗಳಲ್ಲಿ ಅದು ಭಾರತದಲ್ಲೂ ಸಾಕಾರವಾಯಿತು.

**ಆಕಾಶವಾಣಿ ಸಂಹಿತೆ (AIR CODE):**

ಆಕಾಶವಾಣಿಯು ಸಮೂಹ ಸಂಪರ್ಕ ಮಾಧ್ಯಮವೆಂದು ತಿಳಿದು ಎಲ್ಲ ವಿಧದ ಕಾರ್ಯಕ್ರಮಗಳು ಆ ಮೂಲಕ ಪ್ರಸಾರ ಮಾಡುವುದು ಸಾಧ್ಯವಿಲ್ಲ. ಎಂತೆಂತಹ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬೇಕೆಂಬುದರ ಬಗೆಗೆ ಅದಕ್ಕೆ ಅವರದೇ ಆದ ಕೆಲವು ನಿಬಂಧನೆಗಳು ಸಂಹಿತೆಯಲ್ಲಿ ರೂಪಿಸಲಾಗಿರುತ್ತದೆ. ಅವುಗಳೆಂದರೆ,

೧. ಮಿತ್ರ ರಾಷ್ಟ್ರಗಳ ಟೀಕೆ ಮಾಡಬಾರದು.

೨. ಧರ್ಮ, ಜಾತಿ, ಮತ, ಪಂಥಗಳ ಅವಹೇಳನ ಮಾಡಬಾರದು.

೩. ಕಾನೂನು ಕಟ್ಟಳೆಗಳನ್ನು ಉಲ್ಲಂಘಿಸುವಂತಹ ಕಾರ್ಯಕ್ರಮಗಳು ಇರಬಾರದು.

೪. ನ್ಯಾಯಾಲಯಗಳನ್ನು ಅವಹೇಳನ ಮಾಡಬಾರದು.

೫. ಭಾರತ ದೇಶದ ಅಧ್ಯಕ್ಷರ ಬಗೆಗೆ ಟೀಕೆ ನಿಂದೆ ಮಾಡಬಾರದು.

೬. ರಾಜಕೀಯ ಪಕ್ಷಗಳ ಟೀಕೆ ಮಾಡಬಾರದು.

೭. ಕೇಂದ್ರ-ರಾಜ್ಯ ಸರ್ಕಾರಗಳ ನಿಂದನೆ ಮಾಡಬಾರದು.

೮. ಭಾರತದ ಸಂವಿಧಾನಕ್ಕೆ ಅಗೌರವ ಸೂಚಿಸುವಂತಹ ಕಾರ್ಯಕ್ರಮಗಳು ನಿಷಿದ್ಧ.

೯. ವೈಯಕ್ತಿಕವಾದ ಟೀಕೆಗಳಿರಬಾರದು.

೧೦. ಸಾರ್ವಜನಿಕ ಸಂಘ ಸಂಸ್ಥೆಗಳನ್ನು ಟೀಕಿಸಬಾರದು. ಇತ್ಯಾದಿ ನಿಯಮ, ನಿಬಂಧನೆಗಳನ್ನು ಒಳಗೊಂಡಿರುತ್ತದೆ.

**ದೂರದರ್ಶನ:**

ಟೆಲಿವಿಷನ್ ಮಾಧ್ಯಮದ ಆವಿಷ್ಕಾರ ೧೯೨೦ರಲ್ಲಿ ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ನಡೆಯಿತು. ಮಹಾಯುದ್ಧಗಳ ತರುವಾಯ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಟೆಲಿವಿಷನ್ ಪ್ರಮುಖ ಸಮೂಹ ಮಾಧ್ಯಮವಾಗಿ ರೂಪುಗೊಂಡಿತು. ಉಪಗ್ರಹ ಸಂವಹನ ಯುಗಕ್ಕೆ ೧೯೬೨ ರಲ್ಲಿ ಜಗತ್ತು ಕಾಲಿಟ್ಟಾಗಿನಿಂದ ಉಪಗ್ರಹ ಟೆಲಿವಿಷನ್ ಚಾನಲ್‌ಗಳು ಸಂಖ್ಯೆಗಣನೀಯವಾಗಿ ಏರಿದೆ. ಪ್ರತಿಯೊಂದು ಚಾನೇಲ್ ಮಿಲಿಯನ್‌ಗಟ್ಟಲೆ ವೀಕ್ಷಕರನ್ನು, ತಲುಪುವ ಗುರಿಯನ್ನು ಹೊಂದಿದೆ. ಭಾರತದಲ್ಲಿ ಉಪಗ್ರಹ ಟೆಲಿವಿಷನ್ ಜಾಲದ ವಿಸ್ತರಣೆಗೆ ಇನ್ಸಾಟ್ ಉಪಗ್ರಹ ಸಂಪರ್ಕ ವ್ಯವಸ್ಥೆಯೇ ಆಧಾರ. ದೇಶದಲ್ಲಿ ಪ್ರಾಯೋಗಿಕ ಟೆಲಿವಿಷನ್ ಕೇಂದ್ರ ನವದೆಹಲಿಯಲ್ಲಿ ೧೯೫೯ರಲ್ಲಿ ಸೆಪ್ಟೆಂಬರ್ ೧೫ ರಂದು ಅಸ್ತಿತ್ವಕ್ಕೆ ಬಂದಿತು. ಸಮುದಾಯ ಅಭಿವೃದ್ಧಿ ಮತ್ತು ಔಪಚಾರಿಕ ಶಿಕ್ಷಣ ಪ್ರಗತಿಗೆ ಅನುಕೂಲವಾಗುವ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಇದಕ್ಕೆ ಯುನೆಸ್ಕೋ ಸಂಸ್ಥೆಯ ಆರ್ಥಿಕ ನೆರವು ಇದ್ದು, ಸುಮಾರು ೧೮೦ ಟೆಲಿಕ್ಲಬ್‌ಗಳು ನಲವತ್ತು ಕಿ.ಮೀ. ಪರಿಧಿಯಲ್ಲಿ ಕಾರ್ಯಕ್ರಮ ವೀಕ್ಷಣೆಗೆಂದು ಸ್ಥಾಪನೆಗೊಂಡವು.

ಬ್ರಿಟಿಷ್ ವಿಜ್ಞಾನಿ ಜಾನ್ ಬೇಯರ್ಡ್ ಕ್ರಿ.ಶ. ೧೯೨೯ರಲ್ಲಿ ಟೆಲಿವಿಷನ್ ಪ್ರಸಾರದ ಸಾಧ್ಯ ಮಾಡುವ ತಂತ್ರಜ್ಞಾನವನ್ನು ಪ್ರದರ್ಶಿಸಿದ ಬ್ರಿಟಿಷ್ ಮತ್ತು ಅಮೆರಿಕಾದಲ್ಲಿ ಹೆಚ್ಚು ಕಡಿಮೆ ಒಂದೇ ಸಮಯದಲ್ಲಿ ಕ್ರಿ.ಶ. ೧೯೩೬ ರಲ್ಲಿಯೇ ಸಾರ್ವಜನಿಕ ಟಿ.ವಿ. ಪ್ರಸಾರ ಪ್ರಾರಂಭವಾಯಿತು. ಆದರೆ ಎರಡನೇ ಮಹಾಯುದ್ಧದಿಂದಾಗಿ ಪ್ರಸಾರ ಮುಂದುವರೆದುದ್ದಿಲ್ಲ. ಯುದ್ಧ ನಂತರ ಕ್ರಿ.ಶ. ೧೯೪೫ರಲ್ಲಿ ಟಿ.ವಿ. ಪ್ರಸಾರ ಪುನರ್ ಪ್ರಾರಂಭವಾಯಿತು. ಕ್ರಿ.ಶ. ೧೯೭೦ರಲ್ಲಿ ಉಪಗ್ರಹ ಟೆಲಿವಿಷನ್‌ಗೆ ಯುಗ ಪ್ರಾರಂಭವಾಯಿತು. ಟೆಲಿವಿಷನ್ ಮಾಧ್ಯಮವು ಭಾರತಕ್ಕೆ ತಡವಾಗಿ ಪಾಶ್ಚಿಮಾತ್ಯ ರಾಷ್ಟ್ರಗಳಿಗಿಂತ ಎರಡು ದಶಕ ಮತ್ತು ಅಭಿವೃದ್ಧಿ ಪರದೇಶಗಳಿಗಿಂತ ಒಂದು ದಶಕ ತಡವಾಗಿ ಬಂದಿತ್ತು. ಫೆಹಂ ದೂರದರ್ಶನ ಕೇಂದ್ರದ ಉದ್ಘಾಟನೆ ಕ್ರಿ.ಶ. ೧೯೫೯ ರಲ್ಲಿ ಆಯಿತು. ದೈನಂದಿನ ಟಿ.ವಿ. ಪ್ರಾರಂಭವಾದದ್ದು ಕ್ರಿ.ಶ. ೧೯೬೫ ರಲ್ಲಿ ಕ್ರಿ.ಶ. ೧೯೭೨-೧೯೭೫ರ ಅವಧಿಯಲ್ಲಿ ದೂರದರ್ಶನ ದೇಶದ ಇನ್ನು ಆರು ನಗರಗಳಿಗೆ ವ್ಯಾಪಿಸಿತು. ಕ್ರಿ.ಶ. ೧೯೮೨ ರಿಂದ ಪ್ರಾರಂಭವಾದ ಮೂರನೆಯ ಘಟ್ಟದಲ್ಲಿ ದೆಹಲಿಯಿಂದ ಬರುವ ಕಾರ್ಯಕ್ರಮಗಳನ್ನು ಮರು ಪ್ರಸಾರ ಮಾಡುವ ಕೇಂದ್ರಗಳು ತ್ವರಿತವಾಗಿ ಬೆಳೆದವು. ೧೯೯೧ರಲ್ಲಿ ಪ್ರಾರಂಭವಾದ ಉದ್ದೇಶ ಉಪಗ್ರಹ ಚಾನಲ್‌ಗಳ ಪ್ರವೇಶ ಭಾರತದ ಟೆಲಿವಿಷನ್ ಚಿತ್ರವನ್ನು ಮೂಲಭೂತವಾಗಿ ಬದಲಿಸಿತು.

ಮುಂಬಯಿ ಕ್ರಿ.ಶ. ೧೯೭೨, ಕಲ್ಕತ್ತಾ, ಮದರಾಸು ಮತ್ತು ಲಕ್ನೋ ನಗರಗಳಲ್ಲಿ ಕ್ರಿ.ಶ. ೧೯೭೫ರಲ್ಲಿ ಟೆಲಿವಿಷನ್ ಕೇಂದ್ರಗಳು ಸ್ಥಾಪನೆಯಾದವು. ಅಮೆರಿಕೆಯ ನಾಸಾ ಸಂಸ್ಥೆಯು ಉಪಗ್ರಹ ಬಳಸಿ ೧೯೭೫ರಲ್ಲಿ SITE ಕಾರ್ಯಕ್ರಮವೊಂದನ್ನು ಆರು ರಾಜ್ಯಗಳ ಹಳ್ಳಿಗಳಿಗೆಂದು ರೂಪಿಸಲಾಯಿತು. ಟೆಲಿವಿಷನ್ ಮಾಧ್ಯಮ ಇಂದು ದೇಶಾದ್ಯಂತ ಹರಡಿದೆ. ಕರ್ನಾಟಕದಲ್ಲಿ ದೂರದರ್ಶನ ರಾಜ್ಯದ ಉತ್ತರದ ಜಿಲ್ಲೆಗಳಲ್ಲಿ ೧೯೭೫-೭೬ರಲ್ಲಿ ನಡೆದಂಥ SITE (Statellite Instructions Television Experiment) ಪ್ರಯೋಗದಿಂದಾಗಿ ಕರ್ನಾಟಕದಲ್ಲಿ ದೂರದರ್ಶನ ಪಾದಾರ್ಪಣೆಯಾಯಿತು. ನವೆಂಬರ್ ೧, ೧೯೮೧ ರಂದು ಬೆಂಗಳೂರು ಕೇಂದ್ರ ಆರಂಭವಾದರೂ ಅದು ದೆಹಲಿ, ಮದ್ರಾಸ್ ಮತ್ತು ಮುಂಬಯಿ ಕೇಂದ್ರಗಳ ಕಾರ್ಯಕ್ರಮಗಳನ್ನು ಮರುಪ್ರಸಾರ ಮಾಡುವ ಕೇಂದ್ರ ಮಾತ್ರ ಆಗಿತ್ತು. ನವೆಂಬರ್ ೯, ೧೯೯೩ ರಲ್ಲಿ ಸ್ವತಂತ್ರ ಕಾರ್ಯಕ್ರಮ ನಿರ್ಮಾಣ ಕೇಂದ್ರದ ರೂಪವನ್ನು ಪಡೆಯಿತು. ಈಗ ಬೆಂಗಳೂರಲ್ಲದೆ, ಗುಲಬರ್ಗಾದಲ್ಲಿಯೂ ಒಂದು ಕೇಂದ್ರವಿದೆ.

ಕನ್ನಡ, ಉರ್ದು, ಸಂಸ್ಕೃತ, ತುಳು ಹಾಗೂ ಕೊಂಕಣಿ ಭಾಷೆಗಳಲ್ಲಿ ಕಾರ್ಯಕ್ರಮಗಳು ತಯಾರಾಗುತ್ತವೆ. ಧಾರವಾಡ, ಗುಲಬರ್ಗಾ ಹಾಗೂ ಶಿವಮೊಗ್ಗಗಳಲ್ಲಿಯೂ ಅಧಿಕ ಸಾಮರ್ಥ್ಯದ ಟ್ರಾನ್ಸ್‌ಮೀಟರ್‌ಗಳಲ್ಲದೇ ಇತರೆಡೆ ಒಟ್ಟು ೩೫ಕ್ಕೂ ಹೆಚ್ಚು ಸಾಮರ್ಥ್ಯದ L.P.T. ಗಳಿವೆ. ಮೊದಲು L.P.T. ಗಳಲ್ಲಿ ದೆಹಲಿ ಕಾರ್ಯಕ್ರಮ ಮಾತ್ರ ಮರುಪ್ರಸಾರವಾಗುತ್ತಿತ್ತು. ೧೯೯೦ ರಿಂದ ಬೆಂಗಳೂರು ಕೇಂದ್ರ ರಾಜ್ಯದ ಇತರ ಕೇಂದ್ರಗಳೊಂದಿಗೆ ಸಂಪರ್ಕ ಪಡೆಯಿತು. ಆಗಿನಿಂದ ಕರ್ನಾಟಕ ಪ್ರಸಾರ ಅಖಿಲ ಕರ್ನಾಟಕ ಮಟ್ಟದಲ್ಲಿ ನಡೆಯುತ್ತಿದೆ. ೧೯೯೪ ರಲ್ಲಿ ಡಿ.ಡಿ. ಚಾನಲ್ ಆರಂಭವಾದಂದಿನಿಂದ ಕನ್ನಡ ಕಾರ್ಯಕ್ರಮ ರಾಷ್ಟ್ರೀಯ ಮಟ್ಟದಲ್ಲೂ ಲಭ್ಯವಾಗುವಂತಾಗಿದೆ. ಈಗ ಬೆಂಗಳೂರು ದೂರದರ್ಶನ ರಾಜ್ಯದ ಜನಸಂಖ್ಯೆಯ ಶೇ. ೭೦ ಜನರಿಗೆ ತಲುಪುತ್ತಲಿದೆ. ಅದರಲ್ಲಿ ಸುಮಾರು ೨೨ ದಶಲಕ್ಷ ಜನ ದೂರದರ್ಶನದ ವೀಕ್ಷಕರಾಗಿದ್ದಾರೆ.

ಕನ್ನಡದ ಮೊದಲ ಖಾಸಗಿ ಚಾನಲ್ ಆದ ಉದಯ ಟಿ.ವಿ.ಯ ಪ್ರಸಾರ ಪ್ರಾರಂಭವಾದದ್ದು ೧೯೯೪ ರಲ್ಲಿ. ೨೦೦೦-೨೦೦೧ರ ಚಾನಲ್‌ಗಳ ಮಹಾಪೂರದ ನಂತರ ಕನ್ನಡದಲ್ಲಿ ಈಗ ದಿನದ ೨೪ ಗಂಟೆಯೂ ಕೆಲಸ ಮಾಡುವ ಆರು ಚಾನಲ್‌ಗಳಿವೆ. ಉದಯ, ಈ ಟಿ.ವಿ., ಝೀ ಟಿ.ವಿ., ಡಿ.ಡಿ. ೯., ಚಂದನ, ಟಿ.ವಿ. ೯., ಇತ್ಯಾದಿ ಚಾನಲ್‌ಗಳು ಕನ್ನಡದಲ್ಲಿ ಪ್ರಸಾರ ಕಾರ್ಯ ಮಾಡುತ್ತಿವೆ.

**ಕೊನೆ ಟಿಪ್ಪಣಿ:-**

ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡ ಅಭಿವೃದ್ಧಿ.

**ಡಾ॥ ಟಿ.ಸಿ. ಪೂರ್ಣಿಮಾ**

ಡಿ.ವಿ.ಜಿ 'ವೃತ್ತ ಪತ್ರಿಕೆ' ಪು-೧೯.

ಡಾ॥ ಬಿ.ಎಸ್. ಚಂದ್ರಶೇಖರ್ ಸಂವಹನ ಮಾಧ್ಯಮಗಳು ಪುಟ ೨೫೭ ರಿಂದ ೨೫೯ ರವರೆಗೆ

ನಾರಾಯಣ ಶಾಸ್ತ್ರಿ - ಪತ್ರಿಕೋದ್ಯಮ ಪುಟ-೧೦
ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ.

ಡಾ॥ ಬಿ.ಎಸ್. ಚಂದ್ರಶೇಖರ "ಸಂವಹನ ಮಾಧ್ಯಮಗಳು" ಪುಟ ೨೫೭-೨೫೯

# ಅಧ್ಯಾಯ : 3

## ಭಾಷಾ ಸ್ವೀಕರಣ

ಮನುಷ್ಯ ಸಮಾಜ ಜೀವಿ, ಅವನು ತನ್ನ ಸುತ್ತ ಮುತ್ತಣ ಜನರೊಂದಿಗೆ ಬಂದಲ್ಲಿ ಒಂದು ರೀತಿಯಲ್ಲಿ ಸಂಪರ್ಕವನ್ನು ಇಟ್ಟುಕೊಳ್ಳಬೇಕಾಗುತ್ತದೆ. ಏಕೆಂದರೆ ಮನುಷ್ಯ ಸಂಘ ಜೀವಿ ಮನುಷ್ಯ ಅನೇಕ ಅವಶ್ಯಕತೆಗಳಿಗಾಗಿ ಇತರರನ್ನು ಅವಲಂಬಿಸಬೇಕಾಗುತ್ತದೆ. ಹಾಗೆಯೇ ಒಂದು ಸಮಾಜವೂ ಕೂಡ ಜನಾಂಗವೂ ಕೂಡ. ಎರಡು ಸಂಸ್ಕೃತಿಗಳು ಒಂದನ್ನೊಂದು ತಿಳಿಯುವ ಪ್ರಸಂಗ ಒದಗಿದಾಗ ಒಂದು ಮತ್ತೊಂದರಿಂದ ಅನೇಕ ಹೊಸ ಭಾವನೆಗಳನ್ನು ಹೊಸ ಅರಿವನ್ನು ಹೊಸ ವಸ್ತುಗಳನ್ನು ಸ್ವೀಕರಿಸುತ್ತದೆ. ಈ ಹೊಸ ಭಾವನೆಗಳ ಮತ್ತು ಹೊಸ ವಸ್ತುಗಳ ಮತ್ತು ಹೊಸ ಅರಿವಿನ ಜೊತೆಯಲ್ಲಿ ಅವುಗಳಿಗೆ ಆ ಭಾಷೆಯಲ್ಲಿರುವ ಹೆಸರುಗಳು ಪ್ರಮಾಣ ಮಾಡಿ ಹೊಸ ಭಾಷೆಯನ್ನು ಪ್ರವೇಶಿಸುತ್ತದೆ.

ಕನ್ನಡವೂ ಕಾಲದಿಂದ ಕಾಲಕ್ಕೆ ಅನೇಕ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿದೆ. ಸಂಸ್ಕೃತದಿಂದ, ಪ್ರಾಕೃತಗಳಿಂದ ಸೋದರ ಭಾಷೆಗಳಾದ ತಮಿಳು, ತೆಲುಗು ಇತ್ಯಾದಿ ಭಾಷೆಗಳಿಂದ ಪೋರ್ಚಗೀಸ್, ಅರೇಬಿಕ್ ಹಿಂದೂಸ್ತಾನಿ, ಇಂಗ್ಲಿಷ್ ಮುಂತಾದ ಭಾಷೆಗಳಿಂದ ಯಥೇಚ್ಚವಾಗಿ ಸ್ವೀಕರಿಸಿದೆ.

**ಸಂಸ್ಕೃತ ಭಾಷೆಗಳಿಂದ:–** ಸ್ನೇಹ, ಪ್ರತಿ, ನಿಭ, ಸ್ಥಾನಂ, ವಕ್ರ ಕಾರ್ಯ, ಆರ್ಯ, ಶಿಥಿಲ, ಸ್ಥೂಲಃ, ವಿದ್ಯಾ ............... ಇತ್ಯಾದಿ.

**ಪ್ರಾಕೃತದಿಂದ:–** ನೆಪ ನೇಹ, ಪಕ್ಕ, ಸದ್ದು, ಸಕ್ಕರೆ, ಇಂಗಾಲ, ಕಂಬ, ಪಡಿ, ವಂಕ, ಕಜ್ಜ, ಅಜ್ಜ, ವಖ್ಖಾಣ, ಠಾಣ ........... ಇತ್ಯಾದಿ.

**ದ್ರಾವಿಡ ಭಾಷೆಗಳಿಂದ:–** ಪೆದ್ದ, ಚೆದುರು, ತೇಂಗೊಳಲು, ಕೆಲಸ, ಅರಸ ............... ಇತ್ಯಾದಿ.

**ಅರೇಬಿಕ್:–** ಅನಾಮತ್ತು, ಆಸಾಮಿ, ಇಲಾಖೆ, ನಾಜೂಕು, .................. ಇತ್ಯಾದಿ.

**ಹಿಂದೂಸ್ತಾನಿ:–** ಕರಾರು, ಗಿರಾಕಿ, ಚಾಳೀಸು, ತರಕಾರಿ, ಸರಕಾರ, ಶಿಲ್ಕು .......... ಇತ್ಯಾದಿ.

**ಇಂಗ್ಲೀಷ್‌ನಿಂದ:–** ರೈಲು, ಕೋರ್ಟ್, ಟಿಕೇಟ್, ಕಾಲೇಜು, ಮಾರ್ಕೆಟ್, ಆಕ್ಸಿಡೆಂಟ್, ಅರೆಸ್ಟ್, ಬಿಜಿನೆಸ್, ನೆಟ್‌ವರ್ಕ್, ಪಾಲಿಟಿಕ್ಸ್, ಲಾಯರ್, ಹೈಟೆಕ್, ಶೂಟಿಂಗ್, ಪಬ್, ನಕ್ಸಲ್ ........ ಇತ್ಯಾದಿ.

ಈ ಮೇಲಿನ ಸ್ವೀಕೃತ ಪದಗಳನ್ನು ಗಮನಿಸಿದಾಗ ಯಾವ ಜೀವಂತ ಭಾಷೆಯೂ ಸಹ ಇತರ ಭಾಷೆಗಳಿಂದ ಪದಗಳನ್ನಾಗಲಿ, ಇತರ ಭಾಷಾಂಶಗಳನ್ನಾಗಲಿ, ಸ್ವೀಕರಿಸದಿರಲು ಸಾಧ್ಯವೇ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಒಂದು ಭಾಷೆಯು ಬದಲಾವಣೆ ಅಥವಾ ಬೆಳವಣಿಗೆಗೆ ಅನ್ಯ ಭಾಷೆಯ ಸಹಕಾರ ಸ್ವೀಕರಣ ಮನೋಭಾವ ಅವಶ್ಯಕ ಆ ಮೂಲಕ ಭಾಷೆಯ ಬೆಳವಣಿಗೆಗೆ ಸಹಕಾರಿ ಎಂಬುದಕ್ಕೆ ನಾವು ಅಂದರೆ ಓದುಗರು ಇಲ್ಲಿ ಗಮನಿಸಬಹುದಾಗಿದೆ. ಕನ್ನಡ ಭಾಷೆಯ ಚರಿತ್ರೆಯನ್ನು ಗಮನದಲ್ಲಿಟ್ಟುಕೊಂಡು ನೋಡುವುದಾದರೆ, ಭಾಷೆಯ ಉಗಮದಿಂದ, ಇಂದಿನ ಅಂದರೆ ಸಮಕಾಲೀನ ಸಂದರ್ಭದವರೆಗೂ ಸಹ ಭಾಷೆಯು ಸ್ವೀಕರಣ ಕ್ರಿಯೆಯಲ್ಲಿ ತೊಡಗಿರುವುದನ್ನು ನಾವು ಕಾಣಬಹುದಾಗಿದೆ. ಈ ಮೂಲಕ ಭಾಷೆಯ ಬೆಳವಣಿಗೆ ಸಹಕಾರಿಯಾಗಿದೆ. ಸ್ವೀಕರಣ ಕಾರ್ಯವು ಸಾಮಾನ್ಯವಾಗಿ ಸಾಂಸ್ಕೃತಿಕ ಪದಕೋಶದಲ್ಲಿ ಮಾತ್ರ ನಡೆದ ನಿತ್ಯೋಪಯೋಗಿ ಪದಗಳು ಆ ಭಾಷೆಯದೇ ಆಗಿರುತ್ತವೆ.

ಕನ್ನಡವು ತನ್ನ ಸುಮಾರು ಎರಡು ಸಾವಿರ ಇತಿಹಾಸದಲ್ಲಿ ಅನೇಕ ಭಾಷೆಗಳಿಂದ ಕನ್ನಡ ದ್ರಾವಿಡ ಭಾಷಾ ವರ್ಗದ ಒಂದು ಭಾಷೆ. ಅದಕ್ಕೆ ಅದರದೇ ಆದ ಮೂಲ ಶಬ್ದ ಭಂಡಾರವಿದೆ. ಈ ಮೂಲ ಭಂಡಾರಕ್ಕೆ ಕಾಲ ಕ್ರಮೇಣ ಸಂಸ್ಕೃತ, ಪ್ರಾಕೃತ, ತಮಿಳು, ತೆಲುಗು, ಮರಾಠಿ, ಪೋರ್ಚುಗೀಸ್, ಅರೇಬಿಕ್, ಪಾರಸಿ, ಹಿಂದೂಸ್ತಾನಿ, ಹಿಂದಿ, ಇಂಗ್ಲೀಷ್, ಮುಂತಾದ ಭಾಷೆಗಳ ಶಬ್ದಗಳು ಬಂದು ಸೇರಿದವು. ಹೀಗೆ ಒಂದು ಸಾವಿರಾರು ಪದಗಳನ್ನು ಸ್ವೀಕರಿಸಿದ್ದರೂ ಅದರ ನಿತ್ಯೋಪಯೋಗಿ ಪದಕೋಶವು ಹೆಚ್ಚು ಕಡಿಮೆ ಸ್ಥಿರವಾಗಿ ಉಳಿದಿದೆ. ಅದರ ವ್ಯಾಕರಣವೂ ಹಾಗೆಯೇ ಸ್ಥಿರವಾಗಿ ಉಳಿದಿದೆ. ಪರಭಾಷೆಯಿಂದ ಪದವೊಂದು ಸ್ವೀಕೃತವಾದರೆ ಅದು ಕನ್ನಡದಲ್ಲಿ, ಕನ್ನಡ ಪದದಂತೆ ವರ್ತಿಸಬೇಕಾಗುತ್ತದೆ. ಒಂದು ಭಾಷೆಯು ಸಾಮಾನ್ಯವಾಗಿ ನಾಮಪದ, ಗುಣವಾಚಕಗಳನ್ನು ತೆಗೆದುಕೊಳ್ಳುವುದು ಹೆಚ್ಚು. ಕ್ರಿಯಾ ಪದಗಳನ್ನು ಸ್ವೀಕರಿಸುತ್ತದೆ. ಸಂಖ್ಯಾ ವಾಚಕಗಳನ್ನು ತೆಗೆದುಕೊಳ್ಳುವುದು ಬಹು ಕಡಿಮೆಯಾದರೂ ಕೆಲವೆಡೆ ಅದೂ ಉಂಟು, ಸರ್ವನಾಮ ಸಮುಚ್ಚಯಗಳನ್ನು ತೆಗೆದುಕೊಳ್ಳುವುದಿಲ್ಲ. ಸರ್ವನಾಮಗಳನ್ನು ಸ್ವೀಕರಿಸುವುದು ಇಲ್ಲವೇ ಇಲ್ಲವೆನ್ನಬಹುದು. ಏಕೆಂದರೆ ಸರ್ವನಾಮಗಳು ಭಾಷೆಯ ಮೂಲಕ ಆಂತರಿಕ ರಚನೆಯಲ್ಲಿ ಸೇರಿ ಹೋಗಿರುತ್ತವೆ. ಎಷ್ಟೋವೇಳೆ ತಮ್ಮಲ್ಲಿರುವ ಶಬ್ದಗಳನ್ನು ಬಿಟ್ಟು ಪರಭಾಷಾ ಶಬ್ದಗಳನ್ನೇ ಹೆಚ್ಚು ಬಳಸಬಹುದು. ಆದರಿಂದ ಮೂಲ ದೇಶೀ ಶಬ್ದಗಳು ಮರೆಯಾಗುತ್ತವೆ.

ಉದಾಹರಣೆಗೆ ಅನ್ನ ಬಂದು ಕೂಳ್ ಮರೆಯಾಯಿತು.

| | | |
|---|---|---|
| ನಕ್ಷತ್ರ | – | ಅರಿಲ್ |
| ಸೂರ್ಯ | – | ನೇಸರ್ |
| ಉತ್ತರ | – | ಬಡಗಲು |
| ದಕ್ಷಿಣ | – | ತೆಂಕಲು |
| ಪಶ್ಚಿಮ | – | ಪಡುವಣ ಹೀಗೆ ಬಳಕೆ ತಪ್ಪಿದವು, ಹೊತ್ತು ಎಂದರೆ ಸೂರ್ಯ ಈಗ Time ಅರ್ಥದಲ್ಲಿ ಬಳಕೆಯಲ್ಲಿದೆ. |

ಅನ್ಯ ಭಾಷೆಯ ಶಬ್ಧಗಳನ್ನು ಒಂದು ಭಾಷೆ ಪಡೆದು ಬಳಸುವುದಕ್ಕೆ ಎರವಲು ಶಬ್ದಗಳು, ಸ್ವೀಕೃತ ಶಬ್ದಗಳು ಎನ್ನುತ್ತಾರೆ. ಅವುಗಳಲ್ಲಿ ಭಾಷಾ ವಿಜ್ಞಾನ ದೃಷ್ಟಿಯಿಂದ ಮೂರು ಬಗ್ಗೆಯಾಗಿ ವಿಂಗಡಿಸುತ್ತಾರೆ.

<u>ಸ್ವೀಕರಣ ಕ್ರಮಗಳು:</u>

1. **ಸ್ವೀಕೃತ ಪದಗಳು** (Loan words) : ಅನ್ಯ ಭಾಷೆಯ ಪದವನ್ನು ಹೆಚ್ಚು ಕಡಿಮೆ ಮೂಲಧ್ವನಿ ಹಾಗೂ ಆಕೃತಿ ಅಥವಾ ರೂಪದಲ್ಲಿ ಪಡೆದರೆ ಸ್ವೀಕೃತ ಪದ ಎನಿಸಿಕೊಳ್ಳುತ್ತದೆ.

2. **ಶಬ್ದಾರ್ಥ ಸ್ವೀಕರಣ** (Loan Shift) : ಒಂದು ಭಾಷೆಯು ಒಂದು ಶಬ್ದ ರೂಪವನ್ನು ಅಥವಾ ಶಬ್ಧಗುಚ್ಛವನ್ನು ಅನ್ಯಭಾಷಾ ಶಬ್ದದ ಅರ್ಥಕ್ಕೆ ಅನುಗುಣವಾಗಿ ಕೊಂಚ ಮಾರ್ಪಾಡು ಮಾಡಿಯೋ, ಇಲ್ಲವೆ ಹಾಗೆಯೇ ಬಳಸಿದಾಗ ಶಬ್ದಾರ್ಥ ಸ್ಥೀಕರಣವಾಗುತ್ತದೆ.

3. **ಸಂಯೋಜಿತ ಸ್ವೀಕರಣ** : ಸ್ವೀಕರಿಸಿದ ಶಬ್ದದ ಭಾಗವನ್ನು ಸ್ಥಳೀಯ ಭಾಷೆಯ ಶಬ್ದರೂಪಕ್ಕೆ ಹೋಗದಂತೆ ಮಾರ್ಪಡಿಸಿಕೊಂಡು ಸಂಯೋಜಿಸಿ ಬಳಸುವುದು ಇದು ಕನ್ನಡದಲ್ಲಿ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ ಎಂಬುದನ್ನು ಗಮನಿಸಬೇಕು.

**ಭಾಷಾ ಸ್ವೀಕರಣವನ್ನು ಇನ್ನೊಂದು ರೀತಿಯಲ್ಲಿ ಮೂಲ ವರ್ಗವಾಗಿ ವಿಂಗಡಿಸುವುದು ಉಂಟು.**

1. **ಸಾಂಸ್ಕೃತಿಕ ಸ್ವೀಕರಣ** (Cultural borrowing) : ಇದು ಸಮಾನ ಸ್ವತಂತ್ರ ಭಾಷೆಗಳ ನಡುವೆ ನಡೆಯುವ ಸ್ವೀಕರಣ ಅಥವಾ ಕೊಳು ಕೊಡುಗೆ ಈ ಸಾಂಸ್ಕೃತಿಕ ಸ್ವೀಕರಣದಲ್ಲಿ ಎರಡು ಮುಖ್ಯ ಅಂಶವಾಗಿದೆ.

2. **ಏಕಪಕ್ಷೀಯ ಸ್ವೀಕರಣ** (Intimate borrowing) : ಇದು ಸಹ ಸ್ವತಂತ್ರ ಭಾಷೆಗಳ ನಡುವೆ ನಡೆಯುವುದಾದರೂ ಸ್ವೀಕರಿಸುವುದು ಏಕಪಕ್ಷೀಯವಾಗಿರುತ್ತದೆ.

3. **ಉಪ ಭಾಷಾ ಸ್ವೀಕರಣ** (Dialect borrowing) : ಇದು ಒಂದು ಭಾಷೆಯ ಎರಡು ಉಪಭಾಷೆಯನ್ನು ಮಧ್ಯೆ ನಡೆಯುವ ಸ್ವೀಕರಣ ಕಾರ್ಯ ಸಾಂಸ್ಕೃತಿಕ ಸ್ವೀಕರಣದ ಒಂದು ಭಾಗವಾಗಿ ಏಕಪಕ್ಷಿಯ ಸ್ವೀಕರಣವನ್ನು ಹೆಸರಿಸಬಹುದು.

ಏಕಪಕ್ಷೀಯ ಸ್ವೀಕರಣವೂ ಕೂಡ ಎರಡು ಸ್ವತಂತ್ರ ಭಾಷೆಗಳ ಮಧ್ಯೆ ನಡೆಯತಕ್ಕಾದದ್ದರೂ ಈ ಸ್ವೀಕರಣವು ಏಕ ಪಕ್ಷಿಯವಾಗಿ ನಡೆಯುವಂತಹುದು. ಎಂದರೆ ಒಂದು ಭಾಷೆ, ಮತ್ತೊಂದು ಭಾಷೆಯಿಂದ ಸ್ವೀಕರಿಸುವುದೇ ಹೊರತು ಆ ಭಾಷೆಗೆ ಏನೂ ಕೊಡಲಾರದು ಅಥವಾ ಇನ್ನೊಂದು ಭಾಷೆಯು ಈ ಭಾಷೆಯಿಂದ ಏನನ್ನು ಸ್ವೀಕರಿಸುವುದಿಲ್ಲ. ಸಾಂಸ್ಕೃತಿಕ ಸ್ವೀಕರಣವು ಪರಸ್ಪರವಾದುದು. ಇಲ್ಲಿ ಒಂದು ಭಾಷೆಯು ಇನ್ನೊಂದು ಭಾಷೆಯಿಂದ ತಾನೂ ಸ್ವೀಕರಿಸಿ ಆ ಭಾಷೆಗೂ ತನ್ನ ಅನೇಕ ಭಾಷಾಂಶಗಳನ್ನು ಹಿಂದಿರುಗಿ ಕೊಡುತ್ತದೆ. ಈ ಅಧ್ಯಯನದಲ್ಲಿ ಹೆಚ್ಚಾಗಿ ಸಾಂಸ್ಕೃತಿಕ ಸ್ವೀಕರಣದ ಮೇಲೆ ಹೆಚ್ಚು ಒತ್ತು ನೀಡಲಾಗಿದೆ.

**ಸಾಂಸ್ಕೃತಿಕ ಸ್ವೀಕರಣ:**

ಸಾಂಸ್ಕೃತಿಕ ಸ್ವೀಕರಣವು ಪರಸ್ಪರವಾದುದು ಎಂದು ಹಿಂದೆಯೇ ಹೇಳಲಾಗಿದೆ. ಒಂದು ಭಾಷೆಯು ಇನ್ನೊಂದರಿಂದ ಹೆಚ್ಚಾಗಿ ಸ್ವೀಕರಿಸಿ, ಪ್ರತಿಯಾಗಿ ಕಡಿಮೆ ಸಂಖ್ಯೆಯಲ್ಲಿ ನೀಡಬಹುದು. ಆದರೂ ಇದು ಪರಸ್ಪರವಾಗಿ ನಡೆಯುವ ಸ್ವೀಕರಣ, ಸ್ವೀಕರಣ ಕಾರ್ಯದಲ್ಲಿ ಭಾಗವಹಿಸುವ ಎರಡು ಭಾಷೆಗಳನ್ನು ಸ್ವೀಕರಿಸುವ ಭಾಷೆ ಕೊಡುವ ಭಾಷೆ ಎಂದು ನಮ್ಮ ಸೌಕರ್ಯಕ್ಕಾಗಿ ಹೆಸರಿಟ್ಟು ಕರೆಯಬಹುದು, ಸ್ವೀಕರಿಸುವ ಭಾಷೆಯ ಧ್ವನಿ ವ್ಯವಸ್ಥೆಗೂ, ವ್ಯತ್ಯಾಸಗಳಿದ್ದರೆ ಆಗ ಸ್ವೀಕರಿಸುವ ಭಾಷೆಯು ತನ್ನ ಧ್ವನಿ ನಿಯಮಗಳಿಗೆ ಇತರ ಭಾಷೆಯ ಪದಗಳನ್ನು ಹೊಂದಿಸಿಕೊಂಡು ಸ್ವೀಕರಿಸುತ್ತದೆ. ಅಂದರೆ, ಸ್ವೀಕರಿಸುವ ಭಾಷೆಯು ಕೇಡುವ ಭಾಷೆಯಲ್ಲಿ ತನಗೆ ಪರಿಚಿತವಲ್ಲ. ಧ್ವನಿಗಳೂ, ಧ್ವನಿ ಸಮುದಾಯಗಳು ಇದ್ದರೆ ಅವುಗಳನ್ನು ತನ್ನಲ್ಲಿ ಅವುಗಳಿಗೆ ಹತ್ತಿರವಾಗಿರುವ ಧ್ವನಿಗಳಾಗಿ ಪರಿವರ್ತಿಸುತ್ತದೆ. ಇದಕ್ಕೆ ಧ್ವನ್ಯಾದೇಶ ಎಂದು ಕರೆಯುವರು. ಇದಕ್ಕೆ ಕನ್ನಡದಿಂದ ಕೆಲವು ನಿದರ್ಶನಗಳನ್ನು ಕೊಡಬಹುದು. ಇಂಗ್ಲೀಷ್‌ನಲ್ಲಿ Z ಧ್ವನಿಯಿದೆ. ಕನ್ನಡದಲ್ಲಿ ಆ ಧ್ವನಿಯಿಲ್ಲ. ಆದರೆ ಅದಕ್ಕೆ ಹತ್ತಿರವಾದ 'ಜ್' ಇದೆ. ಇಂಗ್ಲೀಷ್‌ನ 'Zoo' ಎಂಬ ಪದವು ಕನ್ನಡದಲ್ಲಿ 'ಜೂ' ಎಂದಗುತ್ತದೆ. ನಮಗೆ ಪರಿಚಿತವಲ್ಲದ ಧ್ವನಿಯ ಸ್ಥಾನದಲ್ಲಿ ತಮ್ಮಲ್ಲಿ ಅದಕ್ಕೆ ಸಮೀಪವಾಗಿರುವ ಧ್ವನಿಯನ್ನು ತಂದಿದ್ದೇವೆ. ಇಂಗ್ಲೀಷ್‌ನ 'Tea' ಎಂಬುದು ಟೀ ಎಂದು ಆಗುತ್ತದೆ. ಇಂಗ್ಲೀಷ್ ಪದದ ಮೊದಲ ವ್ಯಂಜನ 't' ಎಂಬುದು ಉಚ್ಚಾರಣೆಗೂ ವ್ಯತ್ಯಾಸವಿದೆ. ಇಂಗ್ಲೀಷ್‌ನ್ 't' ವರ್ತ್ಸ್ಯಧ್ವನಿ ಕನ್ನಡದ 'ಟ್' ವು ಮೂರ್ಧನ್ಯ, ನಮ್ಮಲ್ಲಿ ವರ್ತ್ಸವಿಲ್ಲ ಅದಕ್ಕೆ ಬದಲು ಇಲ್ಲಿ ಮೂರ್ಧನ್ಯವನ್ನೇ ಬಳಸಿದ್ದೇವೆ. ಕನ್ನಡದ ಪದಗಳೆಲ್ಲವೂ ಸ್ವರಾಂತಗಳಾಗಿರುವುದರಿಂದ ಪದಗಳು ಸ್ವರಾಂತವಾಗುತ್ತವೆ. 'Hospital', ಆಸ್ಪತ್ರೆ, 'Watch', ವಾಚು, 'Cycle', ಸೈಕಲ್, 'Biscuit' ಬಿಸ್ಕತ್ತು ಈ ಉದಾಹರಣೆಗಳಲ್ಲಿ ಧ್ವನ್ಯಾದೇಶವನ್ನು ಕಾಣಬಹುದು.

ಪರ ಭಾಷೆಯಲ್ಲಿ ಹೆಚ್ಚು ಪರಿಚಿತವಾಗಿ ವಿದ್ಯಾವಂತರ ಮೂಲಕ ಅದರ ಪದಗಳು ಹೆಚ್ಚು ವ್ಯತ್ಯಾಸವಾಗದೆ ಪ್ರಚಾರಕ್ಕೆ ಬಂದರೆ ಧ್ವನ್ಯಾದೇಶವನ್ನು ಪಡೆದ ಪದವೂ ಅಷ್ಟು ವ್ಯತ್ಯಾಸವಾಗದ ಪದವೂ ಎರಡೂ ಕಡೆ ಭಾಷೆಯಲ್ಲಿ ಬಳಕೆಯಾಗಬಹುದು. ಕನ್ನಡದಲ್ಲಿ ಆಸ್ಪತ್ರೆ Hospital ಎಂಬ ಎರಡು ಪದಗಳೂ ಬಳಕೆಯಲ್ಲಿವೆ. "ಕಾಪಿ" ಎಂದು ಹೇಳುತ್ತಿದ್ದ ಹಳ್ಳಿಯವರೂ ವಿದ್ಯಾವಂತರನ್ನು ಸರಿಸಿ ಈಗ "ಕಾಫಿ" ಎಂದು ಮೂಲಕ್ಕೆ ಹತ್ತಿರವಾಗುವ ರೀತಿಯಲ್ಲಿ ಹೇಳುತ್ತಿದ್ದಾರೆ. ಈಗಾಗಿ ವಿದ್ಯಾವಂತರ ಭಾಷೆ ಹೇಳುವವರ ಭಾಷೆಯಲ್ಲಿ ಸ್ವೀಕರಣ ಹೇಳುತ್ತದೆ.

ಪರಭಾಷೆಯ ಪದಗಳ ಒಂದು ಪ್ರತ್ಯಾಯವು ಬಹುವಾಗಿ ಬಳಕೆಯಲ್ಲಿದ್ದರೆ ಅದನ್ನು ದೇಶ್ಯ ಪದಗಳಿಗೂ ಹತ್ತಿಸುವುದುಂಟು ಲ್ಯಾಟಿನ್, ಫ್ರೆಂಚ್ ಪ್ರತ್ಯಯ able ಎಂಬುದು agree-able excusalde ಮುಂತಾದ ಕಡೆಗಳಲ್ಲೂ ಕಾಣಿಸಿಕೊಳ್ಳುತ್ತದೆ. Cat, bear, ಎಂಬುದು ದೇಶ್ಯ ಪದಗಳು ಕಾರ ಎಂಬ ಪ್ರತ್ಯಯವು ಸಂಸ್ಕೃತದ್ದು ಕುಂಭಕಾರ – ಕುಂಬಾರ ಚರ್ಮಕಾರ– ಚಮ್ಮಾರ ಇತ್ಯಾದಿಗಳಲ್ಲಿ ಇದನ್ನು ಕಾಣಬಹುದು. ಈ ಪ್ರತ್ಯಯವನ್ನು ತೋಟಕಾರ, ನೇಕಾರ, ಎಲ್‌ಗಾರ ಮುಂತಾದ ಕಡೆಗಳಲ್ಲಿ ದೇಶ್ಯ ಶಬ್ದಗಳಿಗೂ ಅಂಟಿಸಿರುವುದನ್ನು ನೋಡಬಹುದು.

ಒಂದು ಭಾಷೆಯಿಂದ ಸ್ವೀಕರಣಗಳು ಹೆಚ್ಚಾಗಿದ್ದರೆ ಆ ಭಾಷೆಯ ಪದಗಳ ರಚನೆಯನ್ನು ಅನುಕರಿಸಿ ಸ್ವೀಕರಿಸುವ ಭಾಷೆಯ ಪದಗಳು ಮಾರ್ಪಾಟಾಗಬಹುದು. ಕನ್ನಡದ ಕೈಗಾರಿಕೆ ಪದವನ್ನು ತೆಗೆದುಕೊಳ್ಳಬಹುದು. ಅದರಲ್ಲಿರುವ ಕಾರ ಪ್ರತ್ಯಯದ ಪ್ರಸ್ತಾಪ ಬೇಡ ಅದು 'ಕೈಗಾರಿಕಾ ಪ್ರಗತಿ' ಕೈಗಾರಿಕಾಭಿವೃದ್ಧಿ ಮುಂತಾದ ಕಡೆಗಳಲ್ಲಿ ಸಂಸ್ಕೃತ ಪದದ ರೂಪವನ್ನು (ಕೈಗಾರಿಕಾ) ಪಡೆಯುವುದನ್ನು ನೋಡಬಹುದು. ಇಂತಹ ಪದಗಳು ಸಮೂಹ ಮಾಧ್ಯಮಗಳಲ್ಲಿ, ಪತ್ರಿಕೆಗಳಲ್ಲಿ ಸೃಷ್ಟಿಯಾಗುತ್ತ ಇವೆ.

ಪರಭಾಷೆಯ ಪದವೇ ವಿವರಣ ರೂಪವಾಗಿದ್ದರೆ ಅವನ್ನು ಸ್ವೀಕರಿಸುವ ಭಾಷೆಯಲ್ಲಿ ಹಾಗೆಯೇ ಮಾಡಿಕೊಳ್ಳಬಹುದು ಇವುಗಳನ್ನು 'ಭಾಷಾಂತರ ಸ್ವೀಕರಣ' ಎಂದು ಕರೆಯುತ್ತಾರೆ. ಈ ಭಾಷಾಂತರ ಸಮೂಹ ಮಾಧ್ಯಮಗಳಲ್ಲಿ ದಿನನಿತ್ಯ ನಡೆಯುತ್ತ ಇದೆ. ಪದಗಳು ಈ ಭಾಷೆಯ ಆದರೂ ಅವುಗಳ ಮಾದರಿ ಮಾತ್ರ ಪರಭಾಷೆಯದು ನಮ್ಮಲ್ಲಿ 'ಹಂಸ' ಎಂಬ ಪದವೂ 'ಗೀತ' ಎಂಬ ಪದವೂ ಇತ್ತು. Swansong ಎಂಬುದನ್ನು ನಾವು ಹಂಸಗೀತ ಎಂದು ಅನುವಾದ ಮಾಡಿಕೊಂಡಿದ್ದೇವೆ. ಹೀಗೆ ಸಮೂಹ ಮಾಧ್ಯಮಗಳಲ್ಲಿ ಭಾಷಾಂತರ ಪತ್ರಿಕೆ ಮತ್ತು ಸ್ವೀಕರಣ ಕಾರ್ಯ ದಿನ ನಿತ್ಯ ನಡೆಯುತ್ತಲೇ ಇರುತ್ತದೆ.

## ಪ್ರಸ್ತುತ ಸುದ್ದಿ ವಾಹಿನಿಗಳಲ್ಲಿ ಸ್ವೀಕರಣ ಕಾರ್ಯ ಮತ್ತು ಇಂಗ್ಲಿಷ್ ಪ್ರಭಾವ

ಸಮಕಾಲೀನ ಸಂದರ್ಭದಲ್ಲಿ ಸಮೂಹ ಮಾಧ್ಯಮಗಳು ವಿಷಯವನ್ನು ಜನರಿಗೆ ತಿಳಿಸಲು ಹಾಗೂ ಸಮೂಹ ಮಾಧ್ಯಮದ ಕಡೆಗೆ ಜನರ ಹಿತಾಸಕ್ತಿ ಹೆಚ್ಚಿಸಲು ಹೊಸ ಹೊಸ ಪದಗಳನ್ನು ಸೃಷ್ಟಿಸುತ್ತಿದ್ದಾರೆ. ಹಾಗೂ ಅನ್ಯ ಭಾಷೆಗಳಿಂದ ಹೊಸ ಹೊಸ ಪದಗಳನ್ನು ಪಡೆಯುತ್ತಿದ್ದಾರೆ. ಸಮೂಹ ಮಾಧ್ಯಮಗಳು ಜನರನ್ನು ಗಮನದಲ್ಲಿ ಇಟ್ಟುಕೊಂಡು ಎಲ್ಲಾ ವರ್ಗಗಳಿಗೂ ಸರಳವಾಗಿ ಅರ್ಥವಾಗುವ ಪದಗಳನ್ನೇ ಸೃಷ್ಟಿಸುವುದು ಹಾಗೂ ಸ್ವೀಕರಿಸುವುದು. ನಿರಂತರವಾಗಿ ಭಾಷೆಯನ್ನು ಬಳಸಬೇಕಾದ ಅವಶ್ಯಕತೆ ಹಾಗು ಅನಿವಾರ್ಯತೆ ಸಮೂಹ ಮಾಧ್ಯಮಗಳಿಗೆ ಇರುವುದರಿಂದಲೇ ಅವು ಭಾಷೆಯನ್ನು ಹೆಚ್ಚಾಗಿಯು, ಸಮರ್ಪಕವಾಗಿಯು ದುಡಿಸಿಕೊಳ್ಳಬೇಕಾಗುತ್ತದೆ. ಓದುಗ ಮತ್ತು ನೋಡುವ ವರ್ಗದ ಬದಲಾಗುವ ಪರಿಸರದ ಸಂದರ್ಭಕ್ಕೆ ತಕ್ಕಂತೆ ಜನರಿಗೆ ಅರ್ಥವಾಗುವ ರೀತಿಯಲ್ಲಿ ಭಾಷೆಯನ್ನು ಬಳಸಬೇಕಾಗುತ್ತದೆ. ಉದಾಹರಣೆಗೆ: ವಿಜ್ಞಾನ ಯುಗದ ಅವಿಷ್ಕಾರವಾಗಿ 'ಏರೋಪ್ಲೇನ್' ಸೃಷ್ಟಿಯಾಯಿತು. ವಿಮಾನ ಎನ್ನುವ ಪದವನ್ನು ಅದಕ್ಕೆ ಪರ್ಯಾಯವಾಗಿ ಕನ್ನಡದಲ್ಲಿ ಅಳವಡಿಸಿಕೊಳ್ಳಲಾಯಿತು. ಈ ಮಧ್ಯೆ 'ಮಹಾರವ' ಎಂಬ ಸಂಸ್ಕೃತಧಾರಿತ ಶಬ್ದವೂ ಸೃಷ್ಟಿಗೊಂಡು, ಬಳಕೆಗೆ ಬಂದರೂ ವಿಮಾನ ಪದವೇ ಉಳಿದುಕೊಂಡಿತು. ಅದರಲ್ಲಿ ಪರಿಚಾರಿಕೆಯಾಗಿ ಶ್ರಮಿಸುವ Airhostess ಗೆ ಕನ್ನಡದಲ್ಲಿ ಅತ್ಯಂತ ಶಬ್ದವನ್ನು ರಚಿಸಿದ್ದು 'ಗಗನ ಸಖಿ' ಎನ್ನುವ ಹೊಸ ಪದವನ್ನು ಸಮೂಹ ಮಾಧ್ಯಮಗಳು ಸೃಷ್ಟಿಸಿದವು. ಇಂತಹ ರಚನಾಶಕ್ತಿ ಇರುವುದರಿಂದಲೇ ಮಾಧ್ಯಮಗಳು ಕನ್ನಡ ಭಾಷಾ ಬೆಳವಣಿಗೆಯ ನಿಟ್ಟಿನಲ್ಲಿ ಹಿರಿಯ ಪಾತ್ರ ವಹಿಸಬಲ್ಲವು ಎಂದು ಹೇಳಬಹುದು.

ಸಮೂಹ ಮಾಧ್ಯಮಗಳಿಂದ ಅಥವಾ ಇದರ ಪ್ರಭಾವದಿಂದ ಭಾಷಾ ಬೆಳವಣಿಗೆ ಎಂದರೆ ಮುಖ್ಯವಾಗಿ ಹೊಸ ಹೊಸ ಪದಗಳು ಸೇರುತ್ತಿರಬೇಕು. ಅವು ಅನ್ಯ ಭಾಷಾ ಶಬ್ದಗಳು ಆಗಿರಬಹುದು ಅಥವಾ ಕನ್ನಡದ್ದೇ ಆದ ಹೊಸ ಸೃಷ್ಟಿಯು ಆಗಿರಬಹುದು. ಹಾಗೆಯೇ ಹಳೇ ಪದವೇ ವ್ಯತ್ಯಾಸಗೊಂಡು ಸ್ಥಾನಪಲ್ಲಟಗೊಂಡ ಹೊಸ ರೂಪ ಮತ್ತೊಂದು ಅರ್ಥ ಕೊಡಲುಬಹುದು. ಕನ್ನಡ ಶಬ್ದ ಭಂಡಾರಕ್ಕೆ ಹೊಸ ಹೊಸ ಶಬ್ದ ಸೇರಬೇಕು, ಕನ್ನಡದ ಪಾಲಿಗೊಂದು ಹೊಸ ಪದ ರಚನೆಗೊಳ್ಳಬೇಕು. ಕನ್ನಡ ಮುಖ್ಯ ವಾಹಿನಿಯನ್ನು ಸೇರಿ ರೂಢಿಗತವಾಗಬೇಕು. ಈ ದೃಷ್ಟಿಯನ್ನೇ ಪ್ರಸ್ತುತವಾದ ಸಮೂಹ ಮಾಧ್ಯಮಗಳು ಅನುಸರಿಸುತ್ತಿವೆ ಎನ್ನಬಹುದು. ಮೇಲೆ ಹೇಳಿದ ಉದಾಹರಣೆಯಂತೆ ಮಾಧ್ಯಮವನ್ನು ಸೃಷ್ಟಿಸಿರುವ ಇನ್ನು ಕೆಲವು ಉದಾಹರಣೆ ಹೀಗಿವೆ:

| | | |
|---|---|---|
| Black Market | - | ಕಳ್ಳಸಂತೆ, ಕಾಳಸಂತೆ, ಕಳ್ಳ ವ್ಯಾಪಾರ |
| Chamber of Commerce | - | ವಾಣಿಜ್ಯ ಮಂಡಳಿ |
| Demonstration | - | ಪ್ರದರ್ಶನ / ಪ್ರಾತ್ಯಕ್ಷಿಕೆ / ಪ್ರತಿಭಟನೆ |
| Electricity | - | ವಿದ್ಯುಚ್ಛಕ್ತಿ |
| Fuel | - | ಇಂಧನ |

| | | |
|---|---|---|
| Hunger Strike | - | ಉಪವಾಸ ಮುಷ್ಕರ |
| Radio | - | ಆಕಾಶವಾಣಿ / ಬಾನುಲಿ |
| Smugler | - | ಕಳ್ಳ ಸಾಗಣೆದಾರ |
| Terrorist | - | ಭಯೋತ್ಪಾದಕ |

ಇಂತಹ ಅಸಂಖ್ಯಾತ ಪದಗಳನ್ನು ಪದಗುಚ್ಛಗಳನ್ನು ಮಾಧ್ಯಮಗಳು ಸೃಷ್ಟಿಸಿದೆ.

ಪ್ರಸ್ತುತದಲ್ಲಿ ಸಮೂಹ ಮಾಧ್ಯಮಗಳು ಹೊಸ ಪದಗಳನ್ನು ಸ್ವೀಕರಣಕ್ಕಾಗಲಿ ಅಥವಾ ಹೊಸ ಪದದ ಸೃಷ್ಟಿ ಮಾಡುವುದಕ್ಕೆ ಆಗಲಿ ಕಾರಣ ಇರುತ್ತದೆ. ಪ್ರಸ್ತುತದಲ್ಲಿ ಸಮೂಹ ಮಾಧ್ಯಮಗಳು ತಮ್ಮ ಪ್ರಚಾರ ಹೆಚ್ಚಿಸಿಕೊಂಡು ಜನರಿಗೆ ಆಕರ್ಷಣೆ ಮಾಡುವಂತಹ ಅನ್ಯ ಭಾಷೆಯ ಪದಗಳನ್ನು ಬಳಸಿಕೊಂಡು ಭಾಷಾ ಸ್ವೀಕರಣ ಒಂದು ಕಾರಣಕ್ಕೆ ನಡೆಯುತ್ತದೆ. ಮತ್ತೊಂದು ಕಾರಣ ನ್ಯೂಸ್ ವಿಭಾಗದವರು ಇಂಗ್ಲಿಷ್ ಭಾಷೆಯಲ್ಲಿ ಬಂದ ಸುದ್ದಿಯನ್ನು ಕನ್ನಡಕ್ಕೆ ತರ್ಜಮೆ ಮಾಡಬೇಕಾಗುತ್ತದೆ. ಈ ಹಂತದಲ್ಲಿ ಎದುರಾಗುವ ಸವಾಲುಗಳು ಅನೇಕ ವೇಳೆ ಬೇರೆ ಭಾಷೆಯ ಪದಗಳಿಗೆ ಕನ್ನಡದಲ್ಲಿ ಸಮನಾರ್ಥ ಪದಗಳು ಸಿಗದ ಸಂದರ್ಭದಲ್ಲಿ ಅದೇ ಪದಗಳನ್ನ ನೇರವಾಗಿ ಬಳಸುವಾಗ ಪದಗಳ ಕೊರತೆಯನ್ನು ಎದುರಿಸುತ್ತಲೇ ಸುದ್ದಿಯನ್ನು ಸಂವಹನ ಮಾಡಬೇಕಾಗಿರುವುದರಿಂದ ಹೊಸ ಹೊಸ ಶಬ್ದಗಳನ್ನು ಸೃಷ್ಟಿಸಬೇಕಾಗುತ್ತದೆ.

ಅನ್ಯ ಭಾಷೆಗಳಿಂದ ಪದಗಳನ್ನು ಸ್ವೀಕರಿಸುವುದು ಹೊಸದೇನಲ್ಲ. ಮೂಲತಃ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಕನ್ನಡ ತನ್ನ ಮೂಲ ಶಬ್ದ ಭಂಡಾರಕ್ಕೆ ಕಾಲ ಕ್ರಮೇಣ ಸಂಸ್ಕೃತ, ಪ್ರಾಕೃತ, ಪೋರ್ಚಗೀಸ್ ಅರೇಬಿಕ್, ಪಾರಸಿ, ಹಿಂದೂಸ್ತಾನಿ, ಹಿಂದಿ ಇಂಗ್ಲಿಷ್ ಮರಾಠಿ, ತೆಲುಗು ಮೊದಲಾದ ಭಾಷೆಗಳಿಂದ ಅನೇಕ ಶಬ್ದಗಳನ್ನು ಸ್ವೀಕರಿಸಿದೆ. ರಾಜಕೀಯ ಸಾಂಸ್ಕೃತಿಕ, ವಾಣಿಜ್ಯ ಪ್ರವಾಸ ಸಂಬಂಧಿ ಸಂಘ ಮತ್ತು ಒಂದಕ್ಕಿಂತ ಹೆಚ್ಚು ಭಾಷಾ ವಲಯದಲ್ಲಿ ಆಗುವ ಪ್ರಭಾವದಿಂದ ಅನ್ಯ ಭಾಷಾ ಸ್ವೀಕರಣೆ ಅನಿವಾರ್ಯವೂ, ಅಧಿಕವೂ ಆಗುತ್ತದೆ.

ಉದಾಹರಣೆಗೆ ಇಸ್ತ್ರಿ, ಪಟಾಲಂ, ಲಟೀಗೆ, ಅನ್ನ, ನೀಸರು, ಅಮುಲು, ಕುಶಾಲು, ನಾಸ್ಟ, ಬ್ಯಾಂಡೇಜು, ಮುಂತಾದ ಪದಗಳಿಂದ ಎರವಲು ಪಡೆಯಲು ಕನ್ನಡ ಭಾಷೆ ಬಳಕೆಯು ಆಧುನೀಕರಣಗೊಳ್ಳಲು ಸಾಧ್ಯವೇ ಇಲ್ಲ. ಮಾಧ್ಯಮಗಳಲ್ಲಿ ಬಳಕೆಯ ದೃಷ್ಟಿಯಿಂದಲೂ ಇದು ಟಂಕೀಕರಣ ಮತ್ತು ಭಾಷಾಂತರೀಕರಣಕ್ಕಿಂತ ತೀರಾ ಸುಲಭ, ಸರಳ ಹಾಗೂ ನೇರ ವಿಧಾನ. ಅನ್ಯ ಭಾಷಾ ಪದಗಳನ್ನು ಬಹುತೇಕ ಮಟ್ಟಿಗೆ ಅದರ ಮೂಲ ಸ್ವರೂಪದಲ್ಲೇ ಬಳಸಬಹುದಾದ್ದರಿಂದ ಮಾಧ್ಯಮಗಳು ಅನ್ಯ ಭಾಷೆಯಿಂದ ಸ್ವೀಕರಣ ಕೆಲವು ಪದಗಳನ್ನು ಗಮನಿಸಬಹುದಾಗಿದೆ.

| | |
|---|---|
| ಖಜಾಂಚಿ | ಅತ್ತರು |
| ಇನಾಮು | ಅರ್ಜಿ ಫಾರಂ |
| ಖರ್ಚು | ನಾಜೂಕು |
| ಬ್ಯಾಂಡು | ಅಂದಾಜು |
| ಸರಹದ್ದು | ಕಂಪ್ಯೂಟರ್ |
| ಸಾಫ್ಟ್‌ವೇರ್ | ಬಸ್ ಸ್ಟ್ಯಾಂಡ್ |
| ಚೆಕ್ಕು | ಟೆಂಪರ್‌ವರಿ |
| ಪಿನ್ನು | ಸಿಗ್ನಲ್ |
| ಚಾಂಪಿಯನ್ ಷಿಪ್ | ಟೂರ್ನ್‌ಮೆಂಟ್ |
| ಸಿಂಗಲ್ಸ್ ಪ್ರಶಸ್ತಿ | ಸಬ್ಸಿಡಿ |
| ಅಫಿಡೇವಿಟ್ | ಅಕಾಡೆಮಿ |
| ಫೈಲು | ಫಿರ್ಯಾದು |
| ಅಹವಾಲು | ಪಿಂಚಣಿ |
| ಟೈಪ್‌ರೈಟರ್ | ರೈಲು .............. ಇತ್ಯಾದಿ |

ಅನ್ಯಭಾಷಾ ಸ್ವೀಕರಣ ಮಾಧ್ಯಮಗಳಲ್ಲಿ ಮಾತ್ರವಲ್ಲ, ಸಮಾಜದ. ಎಲ್ಲ ವರ್ಗದ ವ್ಯವಹಾರಗಳಲ್ಲಿ ಆಗುತ್ತಿರುವುದು ಗಮನಾರ್ಹ. ಭಾಷಾ ಬೆಳವಣಿಗೆ ದೃಷ್ಟಿಯಿಂದ ಉತ್ತಮವಾದ ತಂತ್ರಗಾರಿಕೆಯ ಸಾಧನವಾಗಿದೆ ಎನ್ನಬಹುದು. ಹೀಗೆ ಸಮಾಜದಾದ್ಯಂತ ಜನರಿಗೆ ಅರ್ಥವಾಗುವಂತಹ ಸ್ವೀಕೃತ ಪದಗಳ ಬಳಕೆ ಇರುವುದರಿಂದಲೇ ಮಾಧ್ಯಮಗಳು ಅವನ್ನು ಬಳಸಬೇಕಾದ ಅಗತ್ಯ ಕಂಡು ಬರುತ್ತವೆ. ಉದಾಹರಣೆಗೆ: Xerox ಎನ್ನುವುದಕ್ಕೆ ಕನ್ನಡದ ಪದ ನೆರಳಚ್ಚು ಎಂಬ ಪದ ಸೃಷ್ಟಿಸಲಾಯಿತಾದರೂ ಕನ್ನಡದಲ್ಲಿ ಉಳಿದದ್ದು "ಜೆರಾಕ್ಸ್" ಪದವೇ. ಸಾಫ್ಟ್‌ವೇರ್, ಕ್ಯಾನ್ಸರ್, ಹಾರ್ಟ್ ಅಟ್ಯಾಕ್, ಬ್ರೇಕ್‌ಫೇಲ್ ............. ಈ ಪದಗಳಿಗೆ ಇದೇ ರೂಪದಲ್ಲಿ ಕನ್ನಡದ ಮಧ್ಯೆ ಬಳಕೆಯಾಗುತ್ತಿರುವುದಕ್ಕೆ ಜನ ಅದನ್ನು ಹಾಗೆಯೇ ಬಳಸುತ್ತಿರುವುದೇ ಕಾರಣವಾಗಿದೆ.

ಇಂತಹ ಕನ್ನಡ ಪದಗಳ ಶುದ್ಧತೆಯ ಬಗ್ಗೆಯೂ ಚರ್ಚೆಗಳು ನಡೆದದ್ದು ಉಂಟು ಆದರೆ ಅನ್ಯಭಾಷಾ ಪದಗಳ ಸ್ವೀಕಾರ ಅಗತ್ಯವಾಗಿದೆ. ಮಾಧ್ಯಮಗಳು ಅವನ್ನು ಸ್ವೀಕರಿಸಿ ನಿರಂತರ ಬಳಸಿ ಅವುಗಳಿಗೆ ಪ್ರಚಾರ ನೀಡುವುದು ಭಾಷೆಯ ಬೆಳವಣಿಗೆಗೆ ಪೂರಕವಾಗಿದೆ.

ಅನ್ಯ ಭಾಷೆಗಳಿಂದ ಪದಗಳನ್ನು ಸ್ವೀಕರಿಸುವುದು ಕನ್ನಡಕ್ಕೆ ಹೊಸದೇನಲ್ಲ. ಮೂಲತಃ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಕನ್ನಡ ತನ್ನ ಮೂಲ ಶಬ್ದ ಭಂಡಾರಕ್ಕೆ ಕಾಲಕ್ರಮೇಣ ಸಂಸ್ಕೃತ, ಪ್ರಾಕೃತ, ಪೋರ್ಚುಗೀಸ್, ಅರೇಬಿಕ್, ಪಾರಸಿ, ಹಿಂದೂಸ್ತಾನಿ, ಹಿಂದಿ, ಇಂಗ್ಲಿಷ್, ಮರಾಠಿ, ತೆಲುಗು ಮೊದಲಾದ ಭಾಷೆಗಳಿಂದ ಅನೇಕ ಶಬ್ದಗಳನ್ನು ಸ್ವೀಕರಿಸಿದೆ. ರಾಜಕೀಯ, ಸಾಂಸ್ಕೃತಿಕ, ವಾಣಿಜ್ಯ, ಪ್ರವಾಸ ಸಂಬಂಧಿ ಸಂಪರ್ಕ ಮತ್ತು ಒಂದಕ್ಕಿಂತ ಹೆಚ್ಚು ಭಾಷಾ ವಲಯದಲ್ಲಿ ಆಗುವ ಪ್ರಭಾವದಿಂದ ಅನ್ಯಭಾಷಾ ಸ್ವೀಕರಣೆ ಅನಿವಾರ್ಯವೂ, ಅಧಿಕವೂ ಆಗುತ್ತದೆ. ಭಾಷಾ ಸ್ವೀಕರಣವು ಇಂದು ಹೆಚ್ಚಾಗಿ ಇಂಗ್ಲಿಷ್ ಭಾಷೆಯಿಂದ ಆಗುತ್ತಿದೆ. ಅಂದ ಮಾತ್ರಕ್ಕೆ ಬೇರೆ ಭಾಷೆಗಳಿಂದ ಕನ್ನಡ ಭಾಷೆ ಸ್ವೀಕರಣೆ ಮಾಡುತ್ತಿಲ್ಲ ಎಂದರ್ಥವಲ್ಲ. ಇಂದಿನ ಪತ್ರಿಕೆಗಳನ್ನು ಓದುವಾಗ ನಮಗೆ ಅನ್ಯ ಭಾಷಾ ಪದಗಳಿಗಿಂತ ಇಂಗ್ಲಿಷ್ ಭಾಷೆಯ ಪದಗಳೇ ಹೆಚ್ಚು ಗೋಚರಿಸುತ್ತವೆ. ಆದ್ದರಿಂದ ಇಂಗ್ಲಿಷ್ ಭಾಷೆಯ ಪದಗಳನ್ನೇ ಇಂದು ಕನ್ನಡ ಪತ್ರಿಕೆಗಳಲ್ಲಿ ಸ್ವೀಕರಣ ಹೆಚ್ಚಾಗಿದೆ.

ಇಂದಿನ ಪತ್ರಿಕೆಗಳು ಇಂಗ್ಲಿಷ್ ಭಾಷೆಯಿಂದ ಹೆಚ್ಚಾಗಿ ಸ್ವೀಕರಣ ಮಾಡಿಕೊಳ್ಳಲು ಅನೇಕ ಪತ್ರಿಕೆಗಳು ಸುದ್ದಿಗಾಗಿ ಈಗಲೂ ಇಂಗ್ಲಿಷ್ ಆಕರಗಳನ್ನು ಹೊಂದಿವೆ. ಸುದ್ದಿ ವಿಶ್ಲೇಷಣೆಯ ಮಾದರಿಗಳನ್ನು ರಾಷ್ಟ್ರಮಟ್ಟದ ಇಂಗ್ಲಿಷ್ ಪತ್ರಿಕೆಗಳು ರೂಪಿಸುತ್ತಿವೆ. ಜಾಹೀರಾತುಗಳು ಇಂಗ್ಲಿಷ್‌ನಲ್ಲಿ ಸಿದ್ಧಗೊಂಡು, ಅನಂತರ ಕನ್ನಡ ಆವೃತ್ತಿಗಳು ಬರುತ್ತವೆ. ರಾಜ್ಯದ ವರದಿಗಳು ಸ್ಥಳೀಯ ವಿದ್ಯಮಾನಗಳು ಮಾತ್ರ ಕನ್ನಡದಲ್ಲಿ ಪ್ರಕಟವಾಗುತ್ತವೆ. ಆದ್ದರಿಂದ ರಾಷ್ಟ್ರಮಟ್ಟದ ಇಂಗ್ಲಿಷ್ ಪತ್ರಿಕೆಗಳು ರೂಪಿಸುವ ಸುದ್ದಿಗಳನ್ನು ಹಾಗೂ ಜಾಹೀರಾತುಗಳನ್ನು ಭಾಷಾಂತರಿಸುವಾಗ ಇಂಗ್ಲಿಷ್ ಪದಗಳ ಸ್ವೀಕರಣ ನೇರವಾಗಿ ಇಲ್ಲವೆ ಕನ್ನಡದ ಅರ್ಥ ಬರುವಂತೆ ಹೊಸ ಪದಗಳ ಸೃಷ್ಟಿ ಕಾರ್ಯ ನಡೆಯುತ್ತದೆ.

ಇಂಗ್ಲೀಷ್, ಕನ್ನಡ ದ್ವಿಭಾಷಿಕರು ಸುದ್ದಿ ವಿಶ್ಲೇಷಣೆಗಳಿಗೆ ಇಂಗ್ಲಿಷ್ ಪತ್ರಿಕೆಗಳನ್ನೇ ಅಧಿಕೃತವೆಂದು ವ್ಯಾಪಕವಾಗಿ ತಿಳಿಯುತ್ತಾರೆ. ಈ ಅಧಿಕೃತತೆ ಓದುಗರಿಗೆ ಮಾತ್ರ ಸೀಮಿತವಾಗದೆ. ಕನ್ನಡ ಪತ್ರಿಕೆಗಳು ಮೂಲ ಆಕರವನ್ನಾಗಿ ಇಂಗ್ಲೀಷ್ ಭಾಷಿಕ ರೂಪವನ್ನು ಆಶ್ರಯಿಸುತ್ತದೆ. ಈ ಸಮೂಹ ಮಾಧ್ಯಮಗಳಲ್ಲಿ ಪ್ರಕಟವಾಗುವ ಜಾಹೀರಾತುಗಳೂ ಕೂಡ ಮೊದಲು ಇಂಗ್ಲಿಷ್‌ನಲ್ಲಿ ರೂಪುಗೊಂಡು ಅನಂತರ, ಕನ್ನಡದಲ್ಲಿ ಅವತರಣಿಕೆಯನ್ನು ಪಡೆಯುತ್ತವೆ. ಈ ರೀತಿಯ ಅವತರಣಿಕೆಯಲ್ಲಿ ಇಂಗ್ಲಿಷ್‌ನಿಂದ ಕನ್ನಡಕ್ಕೆ ಸ್ವೀಕರಣ ಕಾರ್ಯ ನಡೆಯುತ್ತದೆ. ಅಲ್ಲದೆ ದೇಶ, ಭಾಷಾ ಪದಗಳ ಕೊರತೆ ಇರುವುದರಿಂದ ಅನ್ಯ ಭಾಷಾ ಪದಗಳ ಸ್ವೀಕರಣ ಕಾರ್ಯ ನಡೆಯುವುದು ಆಶ್ಚರ್ಯವೇನಲ್ಲ.

ಕೊನೆ ಟಿಪ್ಪಣಿ: ಡಾ॥ ಎಂ. ಚಿಂದಾನಂದ ಮೂರ್ತಿ – ಭಾಷಾ ವಿಜ್ಞಾನದ ಮೂಲತತ್ವಗಳು.

ಡಾ॥ ಹಂಪ ನಾಗರಾಜಯ್ಯ – ದ್ರಾವಿಡ ಭಾಷಾ ವಿಜ್ಞಾನ.

ಡಾ॥ ಕೆ.ವಿ. ನಾರಾಯಣ – ಕನ್ನಡ ವಿಶ್ವವಿದ್ಯಾನಿಲಯದ ವಿಶ್ವಕೋಶ ಭಾಷೆ–

# ಅಧ್ಯಾಯ : ೪

## ಸುದ್ದಿ ವಾಹಿನಿಯಲ್ಲಿ ಭಾಷಾ ಬಳಕೆ

ಭಾಷೆಯನ್ನು ಕುರಿತು ಹಲವಾರು ಭಾಷಾ ವಿಜ್ಞಾನಿಗಳು ಅಧ್ಯಯನಗಳನ್ನು ನಡೆಸಿದ್ದಾರೆ. ಸಮೂಹ ಮಾಧ್ಯಮಗಳಲ್ಲಿ ಭಾಷೆ ಕುರಿತು ಸಹ ಅನೇಕ ವ್ಯಕ್ತಿಗಳು ಅಧ್ಯಯನಗಳು ಚರ್ಚೆಗಳನ್ನು ನಡೆಸಿದ್ದಾರೆ. ಒಟ್ಟಾರೆಯಾಗಿ ಭಾಷಾ ಬಳಕೆಯ ಪ್ರಮುಖವಾಗಿ ಮೂರು ರೀತಿಯಲ್ಲಿ ಗುರುತಿಸಬಹುದಾಗಿದೆ. ಒಂದು, ಶಿಕ್ಷಣವಲಯ, ಎರಡು, ಆಡಳಿತ ವಲಯ ಮತ್ತೊಂದು ಮಾಧ್ಯಮ ವಲಯ ಈ ಮೂರು ರೀತಿಯ ವಲಯಗಳಲ್ಲಿ ಸಾಮಾಜಿಕ ವ್ಯವಹಾರದಲ್ಲಿ ಅಥವಾ ಸಂವಹನಕ್ಕಾಗಿ ಭಾಷೆಯ ಬಳಕೆಯನ್ನು ಗುರುತಿಸುತ್ತೇವೆ. ಈ ಭಾಷಾ ಬಳಕೆ ಔಪಚಾರಿಕ ಮತ್ತು ಅನೌಪಚಾರಿಕವೆಂದು ಎರಡು ರೀತಿಯಲ್ಲಿ ಬಳಸಲ್ಪಡುವುದನ್ನು ನಾವು ಗಮನಿಸಿದ್ದೇವೆ.

ಸಮೂಹ ಮಾಧ್ಯಮಗಳಲ್ಲಿ ಪ್ರಮಾಣಿತವಾದ ಭಾಷೆಯು ಬಳಕೆಯಾಗುತ್ತದೆ. ದೂರದರ್ಶನದಲ್ಲಿ ನಿರೂಪಕ, ನಿರೂಪಕಿಯರಿಂದ ಹಾಗೂ ಸುದ್ದಿ ವಾಚಕರಿಂದ ಭಾಷೆಯ ವಿಶಿಷ್ಟವಾಗಿ ಬಳಕೆಯಾಗುತ್ತಿರುತ್ತದೆ. ಅಲ್ಲಿ ಒಂದು ವಿಶಿಷ್ಟವಾದ ಭಾಷೆ ಬಳಸಲ್ಪಡುತ್ತಿದೆ. ಹಾಗೆಯೇ ಔಪಚಾರಿಕವೂ ಅಲ್ಲದ ಅನೌಪಚಾರಿಕವೂ ಅಲ್ಲದ ರೀತಿಯಲ್ಲಿ ಬಳಕೆಯಾಗುವುದನ್ನು ಕಾಣುತ್ತೇವೆ. ಅದು ವೀಕ್ಷಕನಿಗೆ ಆಕರ್ಷಣೀಯವಾಗಿರುತ್ತದೆ. ಇದಕ್ಕೆ ಕಾರಣವೇನು ? ಏಕೆ ಅತ್ಯಾಕರ್ಷಕವಾಗಿರುತ್ತದೆ ? ಭಾಷಾ ಬಳಕೆಯ ವಿಧಾನವೇ ? ಅಥವಾ ಭಾಷಾ ರಚನೆಯ ಶೈಲಿಯೇ ? ಭಾಷಾ ಬಳಕೆಯ ಧ್ವನಿಯೋ, ಹಾಗೆಯೇ ದೃಶ್ಯ ಮಾಧ್ಯಮವೇ ಎಂಬ ಪ್ರಶ್ನೆಗಳನ್ನು ಈ ಪ್ರಸ್ತುತ ಅಧ್ಯಯನ ನಡೆದಿದೆ.

ಈ ಹಿನ್ನಲೆಯಲ್ಲಿ ಸುದ್ದಿ ವಾಹಿನಿಯ ಭಾಷಾ ಬಳಕೆಯನ್ನು ಮೂರು ಮುಖ್ಯ ಹಂತಗಳಲ್ಲಿ ಚರ್ಚಿಸಲಾಗಿದೆ. ಅವುಗಳೆಂದರೆ,

1) ಧ್ವನಿ ರಚನೆ
2) ಪದ ರಚನೆ
3) ವಾಕ್ಯ ರಚನೆ

**೪.೧ ಧ್ವನಿ ರಚನೆ:**

ಧ್ವನಿಗಳು ಹುಟ್ಟುವ ಸ್ಥಾನಗಳ ಕುರಿತಾಗಿರುವ ಅಧ್ಯಯನ ಕ್ರಮವೇ ಧ್ವನಿರಚನಾಶಾಸ್ತ್ರವಾಗಿರುತ್ತದೆ. ಉಚ್ಚಾರಣೆಯ ಸ್ಥಾನವನ್ನು ಹಾಗೂ ಉಚ್ಚಾರಣೆಯ ಕ್ರಮವನ್ನು ಗುರುತಿಸಲಾಗುತ್ತದೆ. ಯಾವ ಧ್ವನಿ ವಿರೋಧ ಪರಿಸರದಲ್ಲಿ ಒಂದು ಅರ್ಥಚೇದಕ ಶಕ್ತಿಯನ್ನು ಪಡೆದಿರುತ್ತದೆಯೋ ಅಂತಹ ಧ್ವನಿಗಳನ್ನು ಧ್ವನಿಮಾಗಳೆಂದು ಕರೆದಿದ್ದಾರೆ. ಇಲ್ಲಿ ನಾವು ಸುದ್ದಿ ವಾಹಿನಿಗಳಲ್ಲಿ ಧ್ವನಿ ರಚನೆ ಹೇಗೆ ಆಗಿದೆ? ಮತ್ತು ಧ್ವನಿಗಳ ಬಳಕೆಯಿಂದ ಸುದ್ದಿಯನ್ನು ಸಿದ್ಧಪಡಿಸುವವರು ಮತ್ತು ಓದುವವರು ಹೇಗೆ ಪರಿಣಾಮಕಾರಿಗೊಳಿಸುತ್ತಾರೆ ಎಂಬುದು ನಾವು ಸುದ್ದಿ ಓದುವಾಗ ಗಮನಿಸವಂತಹ ಅಂಶ ಮುಖ್ಯವಾದದ್ದು.

ಸುದ್ದಿ ಪ್ರಸಾರದಲ್ಲಿ ಸುದ್ದಿಯನ್ನು ಓದುವಂತಹ ವ್ಯಕ್ತಿಯ ಭಾಷೆಯಲ್ಲಿ ಧ್ವನಿರಚನೆ ವಿಶಿಷ್ಟವೂ, ವಿಭಿನ್ನವೂ ಆಗಿರುತ್ತದೆ. ಮೊದಲನೆಯೊಂದನ್ನು ನಾವು ಬಹಳ ಮುಖ್ಯವಾಗಿ ಗಮನಿಸುವ ಅಂಶವೆಂದರೆ ಓದುವಂತಹ ವ್ಯಕ್ತಿಯ ಧ್ವನಿ ಮೂಲತಃ ಗಡುಸಾಗಿ, ಒರಟಾಗಿದ್ದು ಗಮನ ಸೆಳೆಯುವಂತಿರುತ್ತದೆ. ಉದಾಹರಣೆ ನೋಡುವುದಾದರೆ 'ಟಿ.ವಿ. ೯ ಅನ್ನು ಸುವರ್ಣ ವಾಹಿನಿಗಳ ಕೆಲ ನಿರೂಪಕರ ಸುದ್ಧಿಯನ್ನು ನಿರೂಪಿಸುವಂಥ ಧ್ವನಿ (ಎಲ್ಲ ಸುದ್ದಿ ವಾಹಿನಿಗಳ ನಿರೂಪಕರ ಧ್ವನಿ ಸಹ) ಆಕರ್ಷಕವಾಗಿರುತ್ತದೆ. ಅವರ ಭಾಷೆಯಲ್ಲಿ ಧ್ವನಿರಚನೆಯನ್ನು ಗಮನಿಸುವುದಾದರೆ ಆಗಿನ ಏ.ಓ.ಹೋ. ಎಂಬ ಧ್ವನಿಗಳು ಬಳಕೆಯಲ್ಲಿವೆ.

ಉದಾಹರಣೆ : ಇದ್ಯಾವುದೋ ಕಾವೇರಿ ನೀರಿಗಾಗಿ ನಡೀತಾ ಇರೋ ಪ್ರತಿಭಟನೆ ಅಂದು ಕೊಂಡ್ರ್ಯಾ ಖಂಡಿತಾ ಅಲ್ಲ !"

ಈ ಮೇಲಿನ ವಾಕ್ಯದಲ್ಲಿ "ಅಂದುಕೊಡ್ರ್ಯಾ" ಎಂಬ ಪದದ ಕೊನೆಯಲ್ಲಿ 'ಆ್ಯ' ಎಂಬ ಧ್ವನಿಯು ಬಳಕೆಯಲ್ಲಿರುವುದು ಗಮನಿಸಬಹುದು. ಕನ್ನಡದಲ್ಲಿ , ಬ್ಯಾಟೆ, ಪ್ಯಾಟೆ. ನ್ಯಾಯ, ಯೋಗ್ಯ, ಆಯೋಗ್ಯ ಮುಂತಾದ ಪದಗಳಲ್ಲಿ "ಆ್ಯ" ಧ್ವನಿ ಬಳಕೆಯಲ್ಲಿದೆ.

ಮತ್ತೊಂದು ಉದಾಹರಣೆ ನೋಡುವುದಾದರೆ ಓ, ಹೋ, ಅಯ್ಯೋ, ನನ್, ಕೈ, ಅಮ್ಮಾ .............. !

ಈ ಮೇಲಿನ ವಾಕ್ಯದಲ್ಲಿ 'ಓ' 'ಹೋ' 'ಆ್ಯ' ಮತ್ತು 'ಅ' ಹೀಗೆ ನಾಲ್ಕು ಧ್ವನಿಗಳು ಒಂದೇ ವಾಕ್ಯದಲ್ಲಿ ಗುರುತಿಸಬಹುದು. ಅನುಕ್ರಮವಾಗಿ 'ಓ, ಹೋ ......... ಆಯ್ಯೋ, ನನ್ ಕೈ' ಈ ಪದಗಳಿಗೆ ನಾಲ್ಕು ಧ್ವನಿಗಳನ್ನು ಕಾಣುತ್ತೇವೆ.

ಟಿ.ವಿ.ಯಲ್ಲಿ ಟಾಪ್ ೧೦ ಬಿಗ್ ನ್ಯೂಸ್, ಮುಖಾಂಶಗಳನ್ನು ಓದುವಾಗ ವಾಕ್ಯದ ಮಧ್ಯ ಮತ್ತು ಕೊನೆಯ ಪದಗಳನ್ನು ಏರುಧ್ವನಿಯಲ್ಲಿ, ದೀರ್ಘಸ್ವರವಾಗಿ ಉಚ್ಚಾರಣೆ ಮಾಡುತ್ತಾರೆ. ಈ ಮೇಲೆ ಉದಾಹರಿಸಿದ ವಾಕ್ಯದಲ್ಲಿನ ಸ್ವರಗಳನ್ನು ನಾವು ಗಮನಿಸಬಹುದು.

ದೂರದರ್ಶನದಲ್ಲಿ ಸುದ್ದಿ ಪ್ರಸಾರ ಅತೀ ಹೆಚ್ಚು ಕೇಳುಗರನ್ನು ತಲುಪಲು, ಆಕರ್ಷಕವಾಗಿ ತೋರಲು, ನೋಡುಗರಿಗೆ ಮತ್ತು ಕೇಳುಗರನ್ನು ಎಚ್ಚರಗೊಳಿಸಲು ಹಾಗೆಯೇ ಸಂವಹನಗೊಳ್ಳುವಲ್ಲಿ ಧ್ವನಿ ರಚನೆಯು ಸಹ ಪರಿಣಾಮಕಾರಿಯಾಗಿದೆ. ಭಾಷಾ ಬಳಕೆಯಲ್ಲಿ ಧ್ವನಿ ಸಹ ಪ್ರಮುಖ ಪಾತ್ರವಹಿಸುತ್ತದೆ. ಭಾಷೆಯು ಮಹತ್ವ ಏನು ಎಂಬುದರ ಬಗ್ಗೆ ಮೊದಲೇ ತಿಳಿದಿದ್ದೇವೆ. ಹಾಗೆಯೇ ವಿಶಿಷ್ಟ ಧ್ವನಿಗಳನ್ನು (ಅಕ್ಷರ) ಬಳಸಿ ಭಾಷೆಯನ್ನು ಆಡುವುದರಿಂದ ಅದು ಕೇಳುಗರಿಗೆ ಆಕರ್ಷಣೀಯವಾಗಿರುತ್ತದೆ. ಸುದ್ದಿ ವಾಹಿನಿಗಳಲ್ಲಿ ವಿಶಿಷ್ಟ ಧ್ವನಿಗಳೇ ಗಮನ ಸೆಳೆಯುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಎಂಬುದನ್ನು ಕಾಣಬಹುದು.

**೪.೨ ಪದ ರಚನೆ:**

ಹಲವು ಧ್ವನಿಗಳ ಮೊತ್ತವೇ ಪದ ರಚನೆಯಾಗಿರುತ್ತದೆ. ಅಂತಹ ಪದ ರಚನೆ ಹಲವು ಬಗೆಯಾಗಿರುತ್ತದೆ. ಪ್ರಮುಖವಾಗಿ ನಾವು ಪದರಚನೆಯಲ್ಲಿ ಮೂರು ಪದಗಳನ್ನು ಹೆಸರಿಸುತ್ತೇವೆ. ೧. ನಾಮಪದ, ೨. ಕ್ರಿಯಾಪದ, ೩. ಗುಣವಾಚಕ ಎಂಬ ಮೂರು ಪ್ರಕಾರಗಳನ್ನು ಗುರುತಿಸುತ್ತೇವೆ. ಇಂತಹ ಪದ ರಚನೆ ನ್ಯೂಸ್ ಚಾನಲ್‌ಗಳಲ್ಲಿ ಆದ ಬಗೆಯನ್ನು ಈ ಕೆಳಗಿನ ಉದಾಹರಣೆಗಳ ಮೂಲಕ ನೋಡಬಹುದು.

೧) ಸುದ್ದಿಯನ್ನು ಓದುವವರು ನಾಮಪದ ಮತ್ತು ಸರ್ವನಾಮಗಳನ್ನು ವ್ಯಂಜನಾಂತವಾಗಿ ಉಚ್ಚರಿಸುತ್ತಾರೆ.
ನಾಮ ಪದಗಳು: ಸೂರ್, ನೀರ್, ಊರ್.
ಸರ್ವನಾಮಗಳು: ನೀವ್, ತಾವ್, ಅವನ್, ಅವಳ್, ಯಾರ್, ಯಾವ್, ಯಾಕ್.

೨) ಆಂಗ್ಲ ಪದಗಳ ಬಳಕೆ ಯಥೇಚ್ಛವಾಗಿ ಬಳಕೆಯಾಗುತ್ತವೆ ಮತ್ತು ವ್ಯಂಜನಾಂತಗೊಳ್ಳುತ್ತವೆ. ಅ್ಯರೆಸ್ಟ್, ರೇಡ್, ಗೋಲ್–ಮಾಲ್, ಲೇಬರ್, ಬ್ರೇಕ್, ಆಫೀಸ್, ಸರೆಂಡರ್, ಲಾಕ್, ಅಪರೇಷನ್, ಫ್ಲ್ಯಾಶ್, ರ‍್ಯಾಗಿಂಗ್ ............. ಇತ್ಯಾದಿ.

೩) ಹೊಸ ಬಗೆಯ ಪದಗಳು ರಚನೆಗಳ್ಳೊತ್ತವೆ. ಬೇರೆ ಬೇರೆ ವಲಯದ ಪದಗಳು ನ್ಯೂಸ್‌ನ್ನು ಸೇರ್ಪಡೆಗೊಳ್ಳುತ್ತವೆ.

| | |
|---|---|
| ಮೀಟರ್ | ಅಲಿಯಾಸ್ |
| ಚಮಕ್‌ಚಲ್ಲೋ | ಹೈತ್‌ಲಗಾ |
| ದಿನ್ | ಅಗ್ನಿ ಕುಂಡ |
| ಯಡವಟ್ಟು | ಸುಪಾರಿ |
| ತಗ್ಗಳಪ್ಪಾ | ಲಾಂಗ್ |
| ಅಗ್ನಿ ಪರೀಕ್ಷೆ | ಪಿಂಪ್ |
| ಫಿಟ್ಟಿಂಗ್ | ಅಬ್ಬೆಪಾರಿ |

ನಿಖಾಲಿ ಅಡ್ಡೆ
ತೀನ್ ಮಟ್ಯಾಶ್
ಗ್ರೀಲ್ ಬಂದ್
ನಡುಕಿ

ಇತ್ಯಾದಿ ಪದಗಳು ಇಲ್ಲಿ ರಚನೆಗೊಂಡಿವೆ.

**ವಿಶೇಷ ಪದಗಳ ರಚನೆ ಮತ್ತು ಬಳಕೆಯ ವಿವರಣೆ.**

ನ್ಯೂಸ್ ಚಾನಲ್‌ಗಳಲ್ಲಿ ಅನೇಕ ಬಗೆಯ ಹೊಸ ಪದಗಳು ರಚನೆಗೊಂಡು, ಬಳಕೆಯಾಗುತ್ತದೆ. ಆ ಪದಗಳ ರಚನೆ ಮತ್ತು ಬಳಕೆ ವಿಶಿಷ್ಟವಾಗಿದೆ. ಅಂತಹ ಕೆಲವು ಪದಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

೧. <u>ಅಲಿಯಾಸ್:</u> ಈ ಪದ ಅನ್ಯ ಭಾಷಾ ಪದ. ಇದನ್ನು ಸಮಕಾಲೀನತೆಯಲ್ಲಿ ಇದಕ್ಕೆ ಪತ್ರಿಕೆ, ಮಾಧ್ಯಮಗಳಿಗೆ, ನ್ಯೂಸ್ ಓದುವಾಗ ಒಬ್ಬನೇ ವ್ಯಕ್ತಿಗೆ ಎರಡು ಅಥವಾ ಹೆಚ್ಚು ಹೆಸರುಗಳಿದ್ದರೆ ಬಳಸುವುದು.
ಉದಾಹರಣೆ "ನಾಗರಾಜ ಅಲಿಯಾಸ್ ಬಾಬಾ" ಈ ರೀತಿ ಬಳಸುತ್ತಾರೆ. ಮೂಲತಃ ಈ ಪದದ ಬಳಕೆ ರೆವಿನ್ಯೂ ಇಲಾಖೆಯಲ್ಲಿ ಕಡತಗಳನ್ನು ಬರೆಯುವಾಗ, ಕಂದಾಯಕ್ಕೆ ಸಂಬಂಧಿಸಿದ ದಾಖಲೆಯಲ್ಲಿ 'ಅಲಿಯಾಸ್' ಎಂಬ ಪದ ಬಳಸುತ್ತಾರೆ. ಆ ವಲಯದ ಪದವನ್ನು ಇಂದು ನ್ಯೂಸ್ ವಾಹಿನಿಯಲ್ಲಿ ನಿರೂಪಕರು ಮತ್ತು ವರದಿಗಾರರು ಒಬ್ಬ ವ್ಯಕ್ತಿಯ ಹೆಸರಿನ ಜೊತೆಗೆ ಇನ್ನೊಂದು ಹೆಸರನ್ನು ಸೂಚಿಸುವಲ್ಲಿ "ಅಲಿಯಾಸ್" ಎಂಬ ಪದವನ್ನು ಬಳಸುತ್ತಾರೆ.

ಉದಾ: "ನಾಗರಾಜ ಅಲಿಯಾಸ್ ಬಾಬಾ ತನ್ನ ಎರಡುವರೆ ಎಕರೆ ಜಮೀನನ್ನು ಪ್ರಭಾವಿ ವ್ಯಕ್ತಿಗಳಿಂದ ಉಳಿಸಿಕೊಳ್ಳಲು ಬಾಬಾ ಅವತಾರ ಎತ್ತಿದ್ದಾನೆ.

೨. <u>ನಿಖಾಲಿ:</u> ಇದು ಉರ್ದುವಿನಿಂದ ಬಂದ ಪದ. ಕನ್ನಡದಲ್ಲಿ ಬಳಕೆ ಇದೆ. ನಿಖಾಲಿ ಎಂದರೆ, ಸಂಪೂರ್ಣ ಖಾಲಿ ಎಂದು ಅರ್ಥ ನೀಡುವಂತೆ ಇದನ್ನು ನ್ಯೂಸ್ ಚಾನಲ್‌ಗಳಲ್ಲಿ ಬಳಸುತ್ತಾರೆ.

<u>ಉದಾ:</u> 'ಸೆಕ್ಸ್ ಖಯಾಲಿ ಜೇಬಲ್ಲಿದ್ದ ದುಡ್ಡೆಲ್ಲ ನಿಖಾಲಿ!'

೩. <u>ಫಿಟ್ಟಿಂಗ್</u>: ಇದು ಇಂಗ್ಲೀಷ್ ಪದ, ಇದರಲ್ಲಿ ಜೋಡಿಸು. ಭದ್ರಗೊಳಿಸು ಎಂದು ಅರ್ಥವಾದರೆ, ನ್ಯೂಸ್ ವಾಹಿನಿಗಳಲ್ಲಿ ವ್ಯಂಗಾರ್ಥದಲ್ಲಿ ಬಳಕೆಯಿದೆ. ಜಗಳ ಹಚ್ಚು ಚಾಡಿ ಹಚ್ಚು, ಕುತಂತ್ರ, ಇಬ್ಬರ ನಡುವೆ ಒಡಕು ಮೂಡಿಸುವುದು ಇತ್ಯಾದಿ ಅರ್ಥದಲ್ಲಿ ಬಳಸಲ್ಪಡುತ್ತದೆ.
<u>ಉದಾ:</u> ಯಡಿಯೂರಪ್ಪ ಹೇಳುವಂತೆ, "ರಾಜ್ಯದಲ್ಲಿ ಕೆಲವು ಮಂದಿ ನನ್ನ ಬಗ್ಗೆ ಹೈಕಮಾಂಡನಲ್ಲಿ 'ಫಿಟ್ಟಿಂಗ್' ಇಡುತ್ತಿದ್ದಾರೆ ಎಂದಿದ್ದಾರೆ. ಆದರೆ ಇದರ ಅರ್ಥ ಚಾಡಿ ಹೇಳುವುದು, ಎತ್ತಿಕಟ್ಟುವುದು, ಕುತಂತ್ರ ಮಾಡುವುದು ಸಹ ಆಗುತ್ತದೆ.

೪. <u>ಅರೆಸ್ಟ್:</u> ಈ ಪದದ ಅರ್ಥ ಬಂಧಿಸು, ಹಿಡಿದು ಹಾಕು, ಕೆಳ ಹಾಕು, ಇತ್ಯಾದಿ. ಇದು ಪೋಲೀಸ್ ಇಲಾಖೆಯಲ್ಲಿ ಬಳಕೆಯಾಗುವ ಪದ. ತಪ್ಪು ಮಾಡಿದವರನ್ನು ಬಂಧಿಸುವಲ್ಲಿ "ಅರೆಸ್ಟ್" ಎಂಬ ಪದ ಬಳಸಲ್ಪಡುತ್ತದೆ. ಇದು ನ್ಯೂಸ್ ವಾಹಿನಿಗಳಲ್ಲಿ ಸಾಮಾನ್ಯವಾಗಿ ಬಳಸುತ್ತಾರೆ. <u>ಉದಾ:</u> "ಸಿ.ಬಿ.ಐ. ನಿಂದ ಜನಾರ್ಧನ ರೆಡ್ಡಿ ಅರೆಸ್ಟ್"

೫. <u>ನ್ಯೂಸ್:</u> ಇದೂ ಇಂಗ್ಲೀಷ್ ಪದ. ಕನ್ನಡದಲ್ಲಿ ಹೆಚ್ಚಾಗಿ ಬಳಕೆಯಾಗುತ್ತದೆ. ಇದು ಸುದ್ದಿ ಎಂಬ ಅರ್ಥವನ್ನು ನೀಡುತ್ತದೆ. ಇದು ಒಂದು ಪದವೂ ಹೌದು. ಇದು ಒಂದು ಪತ್ರಿಕೆಯ ಹೆಸರು ಹೌದು. ಹಲವಾರು ಮಾಹಿತಿಗಳನ್ನು ಕೊಡುವ ಒಂದು ವಲಯಕ್ಕೆ ಈ ನ್ಯೂಸ್ ಸೇರುತ್ತದೆ. ಹಾಗೆಯೇ ಹೊಸ ನುಡಿ, ತಾಜಾ ಸುದ್ದಿ, ಕುತೂಹಲಕರ ಸುದ್ದಿ ಎನ್ನುವ ಅರ್ಥವನ್ನು ಸಹ ಕೊಡುತ್ತದೆ.

೬. <u>ವಾರೆಂಟ್:</u> ಇದು ಬಂಧನದ ಪತ್ರ. ಬಂಧಿಸಲು ಆದೇಶಿಸಿದ ಪತ್ರವನ್ನು "ವಾರೆಂಟ್" ಎಂದು ಕರೆಯುತ್ತಾರೆ. ಇದು ಪೋಲೀಸ್ ವಲಯದ ಪದ. ಇದು 'ವಾರೆಂಟ್ ನೋಟಿಸು' 'ಅರೆಸ್ಟ್ ವಾರೆಂಟ್' ಎಂಬಲ್ಲಿ ಬಳಕೆಗೊಳ್ಳುತ್ತದೆ. ಇದು ಈ ಪದ ನೇರ ಪ್ರಸಾರದಲ್ಲಿ ಬಳಸಲ್ಪಡುತ್ತದೆ. ಟಿ.ವಿ. ೯ ಎಂಬ ಸುದ್ದಿ ವಾಹಿನಿಯಲ್ಲಿ ಕ್ರೈಂ ಸುದ್ದಿ ಪ್ರಸಾರಕ್ಕಾಗೀನೇ "ವಾರೆಂಟ್" ಎಂಬ ಕಾರ್ಯಕ್ರಮವನ್ನು ರೂಪಿಸಿದ್ದಾರೆ.
ಉದಾ: "ಜಗನ್‌ಗೆ ವಾರೆಂಟ್ ಇನ್ನೂ ತಲುಪಿಲ್ಲ" ............. !

೭. <u>ಖಟ್ಲೆ:</u> ಈ ಪದದ ಸಾಮಾನ್ಯ ಅರ್ಥ ಜಗಳ, ನ್ಯಾಯ, ಗಲಾಟೆ. ಈ ಖಟ್ಲೆ, ಎಂಬ ಪದವು ಮರಾಠಿಯಿಂದ ಕನ್ನಡಕ್ಕೆ ಸ್ವೀಕರಣಗೊಂಡಿದೆ. ಇದಕ್ಕೆ ಜನಸಾಮಾನ್ಯರೂ ವ್ಯವಹಾರಿಕವಾಗಿ ಬಳಸುತ್ತಾರೆ. ಆದರೆ, ನ್ಯೂಸನಲ್ಲಿ ವಿಶೇಷವಾಗಿ ಬಳಕೆಯಾಗುತ್ತವೆ. ಹಾಗೆಯೇ ಕೋರ್ಟ್‌ಗಳಲ್ಲಿ ದಾವೆ ಎಂಬುದರ ಸಂವಾದಿಯಾಗಿ ಈ ಖಟ್ಲೆ ಎಂಬ ಪದವೂ ಬಳಕೆಯಾಗುತ್ತವೆ.

೮. <u>ಲಾಂಗ್:</u> ಉದ್ದನೆಯಾದ ಕತ್ತಿಯಂಥ ಆಯುಧ. ಇದು ಅನ್ಯಾ ಭಾಷಾ ಪದ. ಇದನ್ನು ಅಚ್ಚಗನ್ನಡದಲ್ಲಿ 'ಗಂಡು ಕತ್ತಿ' ಎಂದು ಕರೆಯುತ್ತಾರೆ. ಇನ್ನೊಂದು ರೀತಿಯಲ್ಲಿ 'ಮಚ್ಚು' ಎಂಬರ್ಥದಲ್ಲಿ ಬಳಕೆಯಿದೆ. ಇಂತಹ ಆಯುಧಗಳು ಪೊಲೀಸ್ ವಲಯದಲ್ಲಿ ಬಳಕೆಯಾಗುತ್ತವೆ. ಇದು ಇಂದು ಸಮೂಹ ಮಾಧ್ಯಮಗಳಲ್ಲಿ ಪ್ರಸಾರಗೊಳ್ಳುವ ಅಪರಾಧ ಸುದ್ದಿಯಲ್ಲಿ ಬಳಕೆ ಜಾಸ್ತಿಯಾಗಿದೆ.

೯. <u>ಖದೀಮ:</u> ಈ ಪದದ ಅರ್ಥ ಕಳ್ಳ. ಕಳವು ಮಾಡುವವನು ಕದಿಯುವವನು, ಜನ ಸಾಮಾನ್ಯರಲ್ಲಿ ಈ ಪದವನ್ನು ಯಥೇಚ್ಛವಾಗಿ ಬಳಸುತ್ತಾರೆ. ವ್ಯವಹಾರಿಕವಾಗಿಯೇ 'ಇವನು ದೊಡ್ಡ ಖದೀಮ ಇದ್ದಾನೆ' ಎಂದು ಬಳಸುವುದನ್ನೇ ನಾವು ಕಾಣಬಹುದಾಗಿದೆ. ಇದು ರಾಜಕೀಯ ವಲಯವಾಗಿ ಬಳಕೆಗೊಳ್ಳುತ್ತದೆ. ಇದನ್ನು ನ್ಯೂಸ್ ವಾಹಿನಿಗಳಲ್ಲಿಯೂ ಸಹ ಬಳಸುತ್ತಾರೆ.

೧೦. <u>ಅಕ್ರಮ</u>: ಇದು ಅನ್ಯಭಾಷೆಯ ಪದವಾಗಿದ್ದು, ಈ ಪದದ ಅರ್ಥ ಕ್ರಮವಲ್ಲದ್ದು- ಅಕ್ರಮ, ಕಳ್ಳ ಸಂಪಾದನೆ. ಆದಾಯ ಮೀರಿದ ಸಂಪಾದನೆ, ಎಂಬ ಅರ್ಥಗಳು ಸಮೂಹ ಮಾಧ್ಯಮಗಳಲ್ಲಿ ಇದೆ. ಇದನ್ನು ರಾಜಕೀಯ ವಲಯದಲ್ಲಿ ಕಾಣಬಹುದಾಗಿದೆ. ವರದಿಗಾರರು ಸಾಮಾನ್ಯವಾಗಿ ಈ ಪದವನ್ನು ಹೆಚ್ಚಾಗಿ ಬಳಸುತ್ತಾರೆ. ಭ್ರಷ್ಟಾಚಾರದ ಹಿನ್ನೆಲೆಯಲ್ಲಿಯು ಸಹ ಬಳಸುತ್ತಾರೆ. ಉದಾಃ "ಅಕ್ರಮ ಆಸ್ತಿ ಸಂಪಾದನೆ ಎಂ.ಎಲ್.ಎ. ಶ್ರೀನಿವಾಸ್ ಮನೆ ಮೇಲೆ ಲೋಕಾಯುಕ್ತ ಪೊಲೀಸ್ ದಾಳಿ"

೧೧. <u>ಅಪರೇಷನ್</u>: ಇದು ಇಂಗ್ಲಿಷ್ ಭಾಷೆಯ ಪದವಾಗಿದ್ದು, ಇದನ್ನು ಕನ್ನಡದಲ್ಲಿ ಶಸ್ತ್ರ ಚಿಕಿತ್ಸೆ ಎಂದು ಕರೆಯುತ್ತಾರೆ. ಇದನ್ನು ಪದವನ್ನು ರಾಜಕೀಯ ವಲಯದಲ್ಲಿ ಬಳಕೆಯಲ್ಲಿದೆ.

ಉದಾಃ "ಬಿ.ಜೆ.ಪಿ. ಯಲ್ಲಿ ಮತ್ತು ಅಪರೇಷನ್ ಕಮಲದ ಸುಳಿವು".

೧೨. <u>ದರ್ಬಾರ್</u>: ಈ ಪದ ವೈಭವ ಪ್ರದರ್ಶನ, ರಾಜದರ್ಬಾರ್ ಎಂಬ ಅರ್ಥವನ್ನು ನೀಡುತ್ತದೆ. ಈ ಪದವನ್ನು ಹಿಂದೂಸ್ತಾನಿಯಿಂದ ಬಂದಿದೆ. ಈ ಪದವನ್ನು ಟಿ.ವಿ. ಮಾಧ್ಯಮದಲ್ಲಿ ವಿಶಿಷ್ಟವಾಗಿ ಬಳಸಲ್ಪಡುತ್ತದೆ.

<u>ಉದಾ:</u> 'ಅಧಿಕಾರಿಗಳೇ ಏನಿದು ರೈತನ ಮೇಲೆ ಅಂಥಾ ದರ್ಬಾರ್' (ಸುವರ್ಣ ವಾಹಿನಿ)

೧೩. <u>ಖದೀಮ</u>: ಈ ಪದದ ಅರ್ಥ ಕಳ್ಳ, ಕಳವು ಮಾಡುವವನು, ಕದಿಯುವವನು, ಜನ ಸಾಮಾನ್ಯರಲ್ಲಿ ಈ ಪದವನ್ನು ಯಥೇಚ್ಛವಾಗಿ ಬಳಸುತ್ತಾರೆ. ವ್ಯವಹಾರಿಕವಾಗಿಯೇ 'ಇವನು ದೊಡ್ಡ ಖದೀಮ ಇದ್ದಾನೆ' ಎಂದು ಬಳಸುವುದನ್ನು ನೋಡುತ್ತೇವೆ. ಈ ಪದ ರಾಜಕೀಯ ವಲಯದಲ್ಲಿ ಬಳಕೆಗೊಳ್ಳುತ್ತದೆ. ಇದನ್ನು ನ್ಯೂಸ್ ವಾಹಿನಿಯಲ್ಲಿ ವಿಶೇಷವಾಗಿ ಬಳಸುತ್ತಾರೆ.

ಈ ರೀತಿಯ ಅನ್ಯಭಾಷಾ ಪದಗಳು ಕನ್ನಡ ಭಾಷೆಯ ಪದಗಳೊಂದಿಗೆ ಹೆಚ್ಚಾಗಿ ಅಪರಾಧ ಇದು ಕೂಡ ಅನ್ಯಭಾಷಾ ಪದವೇ ವಲಯದಲ್ಲಿ ಬಳಕೆಯಾಗುತ್ತದೆ. ಸುದ್ದಿ ಎಂಬ ಲೋಕದಲ್ಲಿ ಬಳಕೆಯಾಗುವ ಅನೇಕ ಪದಗಳ ಹಿಂದಿ, ಇಂಗ್ಲೀಷ್, ಉರ್ದು, ಮರಾಠಿ ಮೂಲದಿಂದ ಬಂದಿರುತ್ತದೆ. ಅನ್ಯ ಭಾಷೆಯ ಪದಗಳ ಸ್ವೀಕರಿಸಿಕೊಂಡು ಕನ್ನಡದ ಜಾಯಮಾನಕ್ಕೆ ಒಗ್ಗಿಸಿಕೊಂಡಿರುವುದು ಕಂಡು ಬರುತ್ತವೆ. ಪದ ರಚನೆ ಮತ್ತು ಪದ ಬಳಕೆಯನ್ನು ಗಮನಿಸಿದಾಗ ಪ್ರಮುಖವಾಗಿ ಈ ಅಂಶ ಕಂಡುಬರುತ್ತದೆ. ವೀಕ್ಷಕರ ಅಥವಾ ಓದುಗರನ್ನು ಗಮನ ಸೆಳೆಯಲಿಕ್ಕೆ ಸುಲಭ ಸಂವಹನಕ್ಕೆ ಈ ರೀತಿ ಭಾಷಾ ಬಳಕೆಯಾಗುತ್ತಿದೆ ಎಂಬುದು ತಿಳಿಯ ಬರುತ್ತದೆ.

<u>**೪.೩ ವಾಕ್ಯ ರಚನೆ:**</u>

ಹಲವು ಪದಗಳು ಕ್ರಮಬದ್ಧವಾಗಿ ಸೇರಿಕೊಂಡು ಒಂದು ವಾಕ್ಯ ರಚನೆಯಾಗುತ್ತದೆ. ಇಂತಹ ವಾಕ್ಯ ರಚನೆಯಾಗುವಲ್ಲಿ ಆಯಾ ಭಾಷೆಯಲ್ಲಿ ಅದರದೇ ಆದ ನಿಯಮ ವಿರುತ್ತದೆ. ಕನ್ನಡದಲ್ಲಿ ಕೃರ್ತಪದ + ಕರ್ಮಪದ + ಕ್ರಿಯಾ ಪದಗಳು ಸೇರಿ ಒಂದು ವಾಕ್ಯ ರಚನೆಗೊಳ್ಳುತ್ತದೆ. ಹೀಗೆ ರಚನೆಗೊಂಡ ವಾಕ್ಯಗಳನ್ನು ಮೂರು ಪ್ರಕಾರಗಳಲ್ಲಿ ಗುರುತಿಸಲಾಗುತ್ತದೆ.

೧) ಸರಳ ವಾಕ್ಯ

೨) ಸಂಕೀರ್ಣ ವಾಕ್ಯ

೩) ಮಿಶ್ರವಾಕ್ಯ

ಇಂತಹ ವಾಕ್ಯಗಳು ನ್ಯೂಸ್ ಚಾನಲ್‌ಗಳಲ್ಲಿ ಹೇಗೆ ರಚನೆಗೊಳ್ಳುತ್ತವೆ ಎಂಬುದನ್ನು ಇಲ್ಲಿ ಉದಾಹರಣೆಯ ಮೂಲಕ ನೋಡಬಹುದು.

ಕೃರ್ತಪದ + ಕರ್ಮಪದ + ಕ್ರಿಯಾ ಪದ = ವಾಕ್ಯ

"ಪ್ರೇಮಿಗಳ ಬದುಕು  ಅಗ್ನಿ ಕುಂಡ!"

ಈ ವಾಕ್ಯ ಕನ್ನಡದ ವಾಕ್ಯ ರಚನಾ ನಿಯಮದಂತೆ ರಚನೆಯಾಗಿಲ್ಲ. ಕೃರ್ತ – ಕರ್ಮ – ಕ್ರಿಯಾ ಪದಗಳು ಕ್ರಮವಾಗಿ ಸೇರಿಕೊಂಡಿಲ್ಲ. ಇದು ಒಂದು ರೀತಿ ಕಾವ್ಯಾತ್ಮಕ ಭಾಷೆಯಂತೆ ವಾಕ್ಯ ರಚನೆಗೊಂಡರೆ, ಈ ವಾಕ್ಯದ ಮುಂದುವರಿದ ವಾಕ್ಯ ನೋಡುವುದಾದರೆ ಅಲ್ಲಿಯೂ ಸಹ ಅಷ್ಟೇ.

"ಮಾಹಿತಿ ಕಾಯ್ದೆಯಡಿ ಅಕ್ರಮ ಬಯಲು"

ಈ ವಾಕ್ಯದಲ್ಲಿ ಕರ್ತೃ ಕರ್ಮ ಕ್ರಿಯಾ ಪದವನ್ನು ಸಂಪೂರ್ಣ ವಾಕ್ಯ ರಚನೆ ಇಲ್ಲ. ಕಾವ್ಯ ಭಾಷೆ ಇದೆ. ವಾಕ್ಯ ರಚನಾ ನಿಯಮ ಬಿಟ್ಟಿದೆ.

"ಬಳ್ಳಾರಿಯ ದುರಾದೃಷ್ಟ ಹೇಗಿದೆಯೋ ನೋಡ್ರಿ !" ಅಲ್ಲೊಂದೆಡೆ ತಡೀಲಕ್ಕೆ ಸಾಧ್ಯನೇ ಇಲ್ಲಾ ಅನ್ನೋವಷ್ಟು ಬಿಸಿಲು ಮತ್ತೊಂದಡೆ ಮ್ಯಾಂಗ್‌ನೀಸ್ ಗಣಿಯ ಗೋಳು. ಜನರನ್ನು ಹೈರಾಣಾಗಿಸೋಕೆ ಈ ಎರಡೂ ಸಾಕಾಗಲಿಲ್ಲ ಅಂತಾ ಒಂದರ ಮೇಲೊಂದರಂತೆ ನಡೆಯುತ್ತಿರೋ ಕೊಲೆಗಳು, ಅದಕ್ಕೆ ರಾಜಕೀಯದ ಬಣ್ಣ. ಈ ಜನಾ ಅದನ್ನೆಲ್ಲ ಹೇಗೆ ಸಹಿಸಿಕೊಂಡಿದ್ದಾರೋ ಏನೋ ಕಣ್ರೀ" ಈ ಪ್ಯಾರಾದಲ್ಲಿ ಸರಳ ಸಂಕೀರ್ಣ ಮತ್ತು ಮಿಶ್ರ ವಾಕ್ಯಗಳನ್ನು ಕಾಣುತ್ತೇವೆ.

ಕೆಲವು ಸಂದರ್ಭದಲ್ಲಿ ನ್ಯೂಸ್ ವಾಹಿನಿಗಳಲ್ಲಿ ವಾಕ್ಯ ರಚನೆ ಅಪೂರ್ಣ ವಾಕ್ಯಗಳಾಗಿರುತ್ತವೆ. ಆದರೂ ಅರ್ಥಪೂರ್ಣವಾಗಿರುತ್ತದೆ. ಕೆಲವೊಮ್ಮೆ ಪ್ರಶ್ನಾರ್ಥಕ ವಾಕ್ಯಗಳು, ಆಶ್ಚರ್ಯ ಸೂಚಕ ವಾಕ್ಯಗಳು ಬಳಕೆಯಾಗುತ್ತವೆ. ಇದು ವರದಿಗಾರರ ಅಥವಾ ನಿರೂಪಕರು ರಚಿಸುವ ವಾಕ್ಯ ರಚನೆಯಾಗಿರುತ್ತದೆ. ಉದಾಹರಣೆಯಾಗಿ ಕೆಲವೊಂದು ವಾಕ್ಯಗಳನ್ನು ಇಲ್ಲಿ ನೋಡಬಹುದು:

## ಸುದ್ದಿ ವಾಹಿನಿಗಳ ತಲೆಬರಹಗಳಲ್ಲಿ ವಾಕ್ಯ ರಚನೆ

- ವರ 'ನಾಟ್ ರೀಚಬಲ್'
- ಲಂಚದ ಮೇಲೆ ಲಂಚ
- ವೈ.ಎಸ್.ಆರ್. ಪುತ್ರನಿಗೆ ಸಿ.ಬಿ.ಐ. 'ಗ್ರೀಲು'
- ಯಾರು 'ತೀನ್' ದಿನ್ ಕಾ ಡಿ.ಜಿ.ಪಿ.
- ಇವಳು ಕಾಲಿಟ್ಟಲ್ಲೆಲ್ಲಾ 'ಕೋಲಾಹಲ'
- ಭೂಮಿಗಾಗಿ 'ಬಾಬಾ' ಅವತಾರ
- 'ಅಕ್ರಮ'ವಾಗಿ ನೀರಿನ ಬಳಕೆ
- ಬೆಳ್ಳಂ ಬೆಳ್ಳಿಗೆ ಶಾಸಕ ಶ್ರೀನಿವಾಸಗೆ "ಲೋಕಾ" ಶಾಕ್
- ಲೋಕಾಯುಕ್ತ ಪೊಲೀಸ್ ೮ ಕಡೆ 'ರೇಡ್'
- ಭೀಮಾ ತೀರದಲ್ಲಿ ಮತ್ತು 'ರಿವೇಂಜ್ ಕಿಲ್ಲಿಂಗ್'
- ಬಿ.ಜೆ.ಪಿ ರಾಜಕೀಯ
- ೩೭ನೇ ದಿನದ 'ಶ್ರೀ' ನಡಿಗೆ
- ರದ್ದಾಗಿದೆ ನಾಗವಾರ 'ಲೇಔಟ್'
- ಅಧಿಕಾರಿಗಳೇ ಏನಿದು ರೈತರ ಮೇಲೆ 'ಅಂಧಾ ದರ್ಬಾರ್'.
- ಅವನ 'ಅಡ್ಡೆ'ಯಲ್ಲಿ ಸಾವಿರಾರು ಚಿತ್ರ ನಟಿಯರಿದ್ದರು.
- ಟಿ.ವಿ. ೯ ಸ್ಪೆಷಲ್ ರಿಪೋರ್ಟ್.
- ಪ್ರೇಮಿಗಳ ಬದುಕು ಅಗ್ನಿಕುಂಡ.

## ಅಧ್ಯಾಯ : ೫

# ಸಮೂಹ ಮಾಧ್ಯಮದ ಭಾಷೆ ಮತ್ತು ವಿಶಿಷ್ಟತೆ

ಪತ್ರಿಕೆ, ದೂರದರ್ಶನ, ಆಕಾಶವಾಣಿ ಇವು ಇಂದಿನ ಸಮೂಹ ಮಾಧ್ಯಮ ಆಗಿವೆ. ಇವುಗಳಿಗೆ ಹೆಚ್ಚು ಹಳೆಯದೆಂದರೆ ಪತ್ರಿಕೆ. ಆದರೆ ಅದನ್ನು ಮೀರಿ ಈಗ ಟಿ.ವಿ. ಮಾಧ್ಯಮ ಬೆಳೆಯುತ್ತಿದೆ. ಸದಾ ಚಲನಶೀಲವಾಗಿರುವ ಸುಲಭ ಗ್ರಾಹ್ಯವಾದ ಮತ್ತು ಹೆಚ್ಚು ಜನರಿಗೆ ತಲುಪುವ ರೀತಿಯಲ್ಲಿ ಇಲ್ಲಿ ಬಳಸುವ ಭಾಷೆ ಇರಬೇಕಾಗುತ್ತದೆ. ಸುದ್ದಿ ಮಾಧ್ಯಮದ ಭಾಷೆ ಎಷ್ಟೋಸಲ, ಅವಸರದ ಸಾಹಿತ್ಯವೇ ಆಗಿರುತ್ತದೆ. ಅದೇ ರೀತಿ ನಿಯತಕಾಲಿಕೆಗಳ ಧಾರವಾಹಿಗಳಿಗೆ ರಚಿಸಲಾದ ಕತ್ತೆ, ಕವನಗಳೂ ಕೂಡ ಈ ಮಾಧ್ಯಮಗಳ ಸ್ವರೂಪಕ್ಕೆ ತಕ್ಕಂತೆ ಬದಲಾಗಬೇಕಾಗುತ್ತದೆ. ಸರಳ ವ್ಯಾವಹಾರಿಕ ಭಾಷೆಯನ್ನು ರೂಪಿಸಿಕೊಳ್ಳುವುದು ಈ ಮಾಧ್ಯಮಗಳ ಅನಿವಾರ್ಯತೆಯೂ ಆಗಿದೆ. ಪತ್ರಿಕೆಗಳಲ್ಲಿ ಬಳಸುವ ಭಾಷೆಯಲ್ಲಿ ಸಾಂದರ್ಭಿಕವಾದ ಚಲನಶೀಲತೆ ಇರುತ್ತದೆ. ರಾಶಿ ರಾಶಿಯಾಗಿ ಬರುವ ಇಂಗ್ಲಿಷ್ ಸುದ್ದಿಗಳನ್ನು ತಕ್ಷಣಕ್ಕೆ ಕನ್ನಡೀಕರಿಸುವ ಹೊಣೆ ಇಲ್ಲಿ ಸುದ್ದಿ ತಯಾರಕರವಾಗಿರುತ್ತದೆ. ಇದು ಅನಿವಾರ್ಯವಾಗಿ ಹೊಸ ಪದಗಳನ್ನು ಸೃಷ್ಟಿಸಿ ಚಾಲನೆಗೊಳಿಸುವುದಕ್ಕೆ ಕಾಣವಾಗುತ್ತದೆ. ಇದರಿಂದ ಅನೇಕ ಸಮಸ್ಯೆಗಳು ಹುಟ್ಟುತ್ತವೆ. ಅದೇ ರೀತಿ ಇಲ್ಲಿ ಬಳಸುವ ಜಾಹೀರಾತು ಮತ್ತಿತ್ತರ ವಿಚಾರಗಳ ಭಾಷೆ ಕೂಡ ಪತ್ರಿಕಾ ವರದಿ ಸುಲಭತೆ – ಸ್ಪಷ್ಟತೆ ಮತ್ತು ಖಚಿತತೆಯಿಂದ ಕೂಡಿರಬೇಕೆಂಬುದು 'ಡಿ.ವಿ.ಜಿ.'ಯವರ ಅಭಿಪ್ರಾಯ. ಆದರೆ ಅವಸರದ ಸುದ್ದಿ ನಿರ್ಮಾಣದಲ್ಲಿ ಇವುಗಳನ್ನು ಅನುಸರಿಸದಿರುವುದು ಕಂಡು ಬರುತ್ತದೆ. ಎಷ್ಟೋ ಸಲ ಇದು ಜನಾಭಿಪ್ರಾಯವನ್ನು ರೂಪಿಸುವುದು ಮಾತ್ರವಲ್ಲ, ಭಾಷೆಯಲ್ಲಿ ಹೊಸ ಹೊಸ ಪದಗಳನ್ನು ಹುಟ್ಟಿ ಹಾಕುತ್ತದೆ. ಆದ್ದರಿಂದ ಈ ಕುರಿತು ಗಮನಹರಿಸಬೇಕಾದ್ದು ಅನಿವಾರ್ಯ.

ಸಾಮಾನ್ಯವಾಗಿ ವರದಿಗಳ ವಸ್ತುನಿಷ್ಠ ಎಂದರೆ, ನಿಸ್ಪಕ್ಷಪಾತವಾಗಿ ಆಗಿರಬೇಕು. ಆದರೆ ಸಾಮಾಜಿಕ ನ್ಯಾಯ–ಸರಿ, ವಸ್ತುಗಳ ಪ್ರಶ್ನೆ ಬಂದಾಗ ವರದಿಗಾರನ ಧೋರಣೆಯಲ್ಲಿ ವ್ಯಕ್ತವಾಗಬೇಕಾಗುತ್ತದೆ. ಆದರೆ ಅಗ್ಗದ ಪ್ರಚಾರ – ರೋಚಕ ವಸ್ತು ಪ್ರಚೋದಕ ರೀತಿ ಬರೆಯುವಿಕೆ ಪತ್ರಿಕೋದ್ಯಮವೆಂದು ಹೆಸರಾಗಿದೆ. ಇತ್ತೀಚೆಗೆ ಅನೇಕ ಪತ್ರಿಕೆಗಳು ಇಂತಹ ಆಮಿಷಕ್ಕೆ ಒಳಗಾಗುತ್ತಿರುವುದು ದುರಂತವೆ ಸರಿ.

# ಸುದ್ದಿ ವಾಹಿನಿಗಳಲ್ಲಿ ಭಾಷಾ ವಿಶಿಷ್ಟತೆ

ಸಂವಹನ ಮಾಧ್ಯಮಗಳಲ್ಲಿ ಎಲ್ಲಾ ಬಗೆಯ ಜನರನ್ನು ತನ್ನತ್ತ ಆಕರ್ಷಿಸುವ ಮಾಧ್ಯಮ. ಎಂದರೆ ಅದು ದೂರದರ್ಶನ ಅಥವಾ ಟಿ.ವಿ. ಮಾಧ್ಯಮ. ಕಣ್ಣಿನಿಂದ ನಡೆಯುತ್ತಿರುವ ಸನ್ನಿವೇಶಗಳನ್ನು ನೋಡುವುದರ ಮೂಲಕ, ಕೇಳಿಸಿಕೊಳ್ಳುವುದರ ಮೂಲಕ ಅರ್ಥೈಸಿಕೊಳ್ಳುವುದರಿಂದಾಗಿ ಈ ಮಾಧ್ಯಮ ಅಕ್ಷರಸ್ಥರು, ಅನಕ್ಷರಸ್ಥರು ಎನ್ನದೇ ಎಲ್ಲರಿಗೂ ಅರ್ಥವಾಗುವಂತೆ, ತಿಳಿಯುವಂತೆ ಅದು ಪ್ರಸಿದ್ಧಿಯಾಗಲು ಈ ವಿಶೇಷ ಗುಣ ಲಕ್ಷಣಗಳು ಕಾರಣ. ಇಂದು ವೇಗವಾಗಿ ಬೆಳೆಯುತ್ತಿರುವ ಜಗತ್ತಿನ ಎಲ್ಲಾ ವಿಧವಾದ ವಿಚಾರಗಳು ಅಷ್ಟೇ ವೇಗವಾಗಿ ಜಗತ್ತಿನ ಎಲ್ಲರಿಗೂ ತಿಳಿಸುವ ಕೆಲಸ ಮಾಡುತ್ತಿರುವುದು ದೂರದರ್ಶನವೇ ಆಗಿದೆ. ದೂರದರ್ಶನದಲ್ಲಿ ಅನೇಕ ಬಗೆಯಾದ ಕಾರ್ಯಕ್ರಮಗಳು ದಿನದ ಇಪ್ಪತ್ತನಾಲ್ಕು ಗಂಟೆಯೂ ಪ್ರಸಾರವಾಗುವಂತೆ ಹಂಚಿಕೆ ಮಾಡಲಾಗಿರುತ್ತದೆ. ಅದರಲ್ಲಿ ಸಿನಿಮಾ, ಧಾರಾವಾಹಿ, ವಾರ್ತೆಗಳು, ಕ್ರೀಡಾ ಸುದ್ದಿಗಳೂ, ಆರೋಗ್ಯ, ಕೃಷಿ, ಆಡಳಿತ, ರಾಜಕೀಯ, ಆಧ್ಯಾತ್ಮ, ಸಂಗೀತ, ಪರಿಸರ , ರಾಜ್ಯ, ರಾಷ್ಟ್ರ, ಎಲ್ಲಾ ಕ್ಷೇತ್ರಗಳ ಪ್ರಮುಖ ವಿಚಾರಗಳನ್ನು ನಾವು ನೋಡುವುದರ ಮೂಲಕ ತಿಳಿಸುವ ಪ್ರಯತ್ನ ದೂರದರ್ಶನ ಮಾಧ್ಯಮ ಮಾಡುತ್ತಿದೆ.

ಇತ್ತೀಚಿನ ಕೆಲ ವರ್ಷಗಳಲ್ಲಿ ಅನೇಕ ಸಂಶೋಧನೆ ಮತ್ತು ಪರಿಶ್ರಮದಿಂದ ನಾವು ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಸಾಧಿಸಿದ ಸಾಧನೆಯಿಂದಾಗಿ, ಪ್ರಪಂಚದ ಯಾವುದೇ ಭಾಗದಲ್ಲಿ, ಸಾಗರ-ಸಮುದ್ರ, ಭೂಮಿ, ಬಾನು, ಗ್ರಹಗಳಲ್ಲಾಗುವ ಬದಲಾವಣೆ ವಿಶೇಷ ಕ್ರಿಯೆಗಳನ್ನು ನಮ್ಮ ಗಮನಕ್ಕೆ ತರುವ ಸಾಧನಗಳಿಂದಾಗಿ ಇಂದು ದಿನದ ೨೪ ಗಂಟೆ ಸುದ್ದಿಗಳನ್ನು ಪಡೆಯಬಹುದು. ವರ್ಷವೆಲ್ಲವೂ ಹೊಸ ಹೊಸ ವಿಚಾರಗಳನ್ನು ಸನ್ನಿವೇಶಗಳನ್ನು, ಸುದ್ದಿಗಳು ನಮಗೆ ದೊರಕುತ್ತಿರುವುದರಿಂದ ಇಂದು ದೂರದರ್ಶನದಲ್ಲಿ ಹೆಚ್ಚಾಗಿ ಪ್ರಸಾರವಾಗುತ್ತಿದ್ದ 'ಮನೋರಂಜನ' ಕಾರ್ಯಕ್ರಮಗಳು ಕಮ್ಮಿಯಾಗಿ ಜನರ ಬುದ್ಧಿ, ಆಸಕ್ತಿ, ಕುತೂಹಲ, ತುಡಿತಕ್ಕೆ ತಕ್ಕಂತೆ ಜಗತ್ತಿನ ಹೊಸ ವಿಚಾರ ತಿಳಿದುಕೊಳ್ಳುವ ಆಸಕ್ತಿಯಿಂದಾಗಿ ಇಂದು ಅಧಿಕ ಸಮಯದಲ್ಲಿ ಪ್ರಸಾರವಾಗುತ್ತಿದೆ. ಅಲ್ಲದೇ ದಿನದ ಇಪ್ಪತ್ತನಾಲ್ಕು ಗಂಟೆಯೂ ಕಾರ್ಯ ನಿರ್ವಹಿಸುವುದು ಕೇವಲ ಒಂದು ರಾಜ್ಯದ ಒಂದು ಪ್ರಸಾರವಾಗುತ್ತಿರುವುದು ಕೇವಲ ಜನರಿಗೆ ಸುದ್ದಿ ಮುಟ್ಟಿಸಲು ಮಾತ್ರವಲ್ಲ ಇಂದು ಅತಿ ಕ್ರಿಯಾಶೀಲವಾಗಿರುವ ನಾಗರೀಕರಿಗೆ ಅವರು ಕುಳಿತಲ್ಲಿಯೇ ವಿಶೇಷ ರೀತಿಯಲ್ಲಿ ಸರಳವಾಗಿ ಅತ್ಯಾಕರ್ಷಕವಾಗಿ ಮನೋರಂಜನಾತ್ಮಕವಾಗಿ, ವಿಭಿನ್ನ ಶೈಲಿಯಲ್ಲಿ ಪ್ರಸಾರ ಮಾಡುತ್ತವೆ. ನ್ಯೂಸ್ ಚಾನಲ್‌ಗಳಲ್ಲಿ ಅವು ಹೇಳುವ ಭಾಷೆ ಅಥವಾ ಮಾಧ್ಯಮ ಮುಖ್ಯವಾಗಿ ಎರಡು ದೃಶ್ಯ ಮಾಧ್ಯಮ ಮತ್ತು ಶ್ರವ್ಯ ಮಾಧ್ಯಮ. ಅಂದರೆ ಒಟ್ಟು ಅಥವಾ ಘಟನೆಗಳನ್ನು ತೋರಿಸುವುದರ ಮೂಲಕ ಮತ್ತು ಅದನ್ನು ಕುರಿತು ಸನ್ನಿವೇಷದ ಜೊತೆಯಲ್ಲಿಯೇ ಧ್ವನಿಯ ಮುಖಾಂತರ ಹೇಳುವ ಮೂಲಕ ನ್ಯೂಸ್ ಚಾನಲ್‌ಗಳು ಪ್ರಸಿದ್ಧಿಗೆ ಬಂದ ಮತ್ತು ಜನರನ್ನು ಆಕರ್ಷಸಲು ಅವುಗಳು ಬಳಸುವ ಭಾಷೆ ಹೇಗಿದೆ ಎಂದು ಅರಿಯುವ ಸಲುವಾಗಿ ನ್ಯೂಸ್ ಚಾನಲ್‌ಗಳಲ್ಲಿನ ಭಾಷಾ ವಿಶಿಷ್ಟತೆಯನ್ನು ಇಲ್ಲಿ ಚರ್ಚಿಸಲಾಗುತ್ತದೆ.

ಇಂದು ದೂರದರ್ಶನದಲ್ಲಿ ಸುದ್ದಿ ವಾಹಿನಿಗಳು ಅಥವಾ ನ್ಯೂಸ್ ಚಾನಲ್‌ಗಳೇ ತುಂಬಿ ಹೋಗಿರುವುದು ಮತ್ತು ಒಂದಕ್ಕೊಂದು ಪೈಪೋಟಿ ಇದ್ದರೂ ಎಲ್ಲಾ ಚಾನಲ್‌ಗಳು ಏಕ ಕಾಲದಲ್ಲಿ ಒಂದೇ ಸುದ್ದಿಯನ್ನು ಬಿತ್ತರಿಸಿದರೂ ಎಲ್ಲವೂ ಉಳಿದುಕೊಂಡು ನೆಡೆದುಕೊಂಡು ತಾವು ಸುದ್ದಿ ಸಮಾಚಾರ ಪ್ರಕಟಿಸುವುದರ ಜೊತೆಗೆ ತಾವು ಈ ಮೂಲಕ ಹಣ ಸಂಪಾದನೆಯ ವಿಷಯದಲ್ಲಿ ವರ್ಷದಿಂದ ಅಧಿಕ ಲಾಭ ಪಡೆಯುತ್ತಾ ಮುನ್ನುಗುತ್ತಿರುವುದು ವಿಶೇಷ. ಸುದ್ದಿ ವಾಹಿನಿಗಳು ತಾವು ಜನರಿಗೆ ವಿಷಯ ಮುಟ್ಟಿಸುವುದರಲ್ಲಿ ಅನುಸರಿಸುತ್ತಿರುವ ವಿಭಿನ್ನವಾದ ಮಾರ್ಗಗಳು ಅದು. ದೃಶ್ಯದ ಮೂಲಕ ಧ್ವನಿಯ ಮೂಲಕ ಮತ್ತು ಪ್ರಕಟವಾಗುವ ಶಬ್ದದ ಮೂಲಕ.

ಹಾಗಾಗಿ ನ್ಯೂಸ್ ಚಾನಲ್‌ಗಳಲ್ಲಿ ಈ ಭಾಷಾ ಪ್ರಯೋಗ ಹೇಗೆ ಸಾಮಾನ್ಯ ನುಡಿಗಳಿಗಿಂತ ಹೇಗೆ ಭಿನ್ನವಾಗಿರುತ್ತದೆ ಎಂಬುದನ್ನು ನಮ್ಮ ಕನ್ನಡ ಭಾಷೆಯಲ್ಲೇ ಪ್ರಸಾರವಾಗುತ್ತಿರುವ ಮೂರು-ನಾಲ್ಕು ನ್ಯೂಸ್ ಚಾನಲ್‌ಗಳು ಇಟ್ಟುಕೊಂಡು ಅಧ್ಯಯನ ಮಾಡುವುದು ಮೂಲಕ ಕಂಡುಕೊಳ್ಳಲಾಗಿದೆ.

೧) ನ್ಯೂಸ್ ಚಾನಲ್‌ಗಳಲ್ಲಿ ಪ್ರಕಟಗೊಳ್ಳುವ ಭಾಷೆಯು (ಲಿಖಿತ ರೂಪದಲ್ಲಿ) ಸರಳವಾಗಿರುತ್ತದೆ.

೨) ಇಲ್ಲಿನ ಭಾಷೆಯು ಒಂದು ರಾಜ್ಯದ ಹೆಚ್ಚಿನ ಜನರು ಬಳಸುವ ಭಾಷೆಯನ್ನು ಅವರ ಆಡುನುಡಿಯಲ್ಲೇ ಮತ್ತು ಸ್ಪಷ್ಟ ರೂಪದಲ್ಲಿ ಪ್ರಸಾರವಾಗುತ್ತದೆ.

೩) ವಾರ್ತೆಯನ್ನು ಓದುವ ಅಥವಾ ಹೇಳುವ ಮೊದಲ ಪ್ರಮುಖಾಂಶ ಅಥವಾ ಮುಖ್ಯಾಂಶಗಳನ್ನು ದೂರದಿಂದಲೂ ನೋಡುವವರೂ ಗುರುತಿಸುವಂತೆ ದಪ್ಪವಾಗಿ ತೋರಿಸುತ್ತಾರೆ.

೪) ಪ್ರಮುಖಾಂಶಗಳನ್ನು ದಪ್ಪವಾಗಿ ತೋರಿಸುವುದು ಮಾತ್ರವಲ್ಲದೆ ಅವುಗಳನ್ನು ವಿಶೇಷ ರೀತಿಯಲ್ಲಿ ಕಂಪ್ಯೂಟರ್ ತಂತ್ರಜ್ಞಾನದ ಸಹಾಯದಿಂದ ಜನರ ಕಣ್ಣು ಅವರ ಮೇಲೆ ಇರುವಂತೆ ಮತ್ತು ಸೆಳೆಯುವಂತೆ ಮಾಡಲು ವಿಭಿನ್ನ ಬಗ್ಗೆಯಲ್ಲಿ ಅಕ್ಷರಗಳು ಚಿತ್ತಾರವಾಗಿ ಮೂಡಿ ಬರುತ್ತಿರುತ್ತವೆ.

೫) ಮುಖ್ಯಾಂಶಗಳನ್ನು ಹೇಳುತ್ತಿರುವವರು ಕೂಡ ಅವುಗಳನ್ನು ಏರು ಧ್ವನಿಯಲ್ಲಿ ಸ್ಪಷ್ಟವಾಗಿ ಹೇಳುತ್ತಿರುತ್ತಾರೆ.

೬) ವಾರ್ತೆಗಳನ್ನು ವಾಚಿಸುವವರು ಅಥವಾ ಹೇಳುವವರು ಸುದ್ದಿಯ ವಿಶೇಷತೆ, ಭೀಕರತೆಯ ಸ್ವಾರಸ್ಯಕ್ಕೆ ತಕ್ಕಂತೆ ಅವರ ಧ್ವನಿ ಏರಿಳಿತ ಕಾಣುತ್ತದೆ. ಆ ಭಾಷಾ ಪ್ರಯೋಗದಿಂದಲೇ ಆ ಸುದ್ದಿಗೆ ಮಹತ್ವ ಕೊಟ್ಟು ಬಿಡುತ್ತಾರೆ. ಅಥವಾ ಮಹತ್ವ ಒದಗಿ ಬಂದು ಬಿಡುತ್ತದೆ.

೭) ನ್ಯೂಸ್ ಓದುವುದರ ಜೊತೆಗೆ ದೃಶ್ಯವನ್ನು ತೋರಿಸುವುದು ಒಂದು ಮುಖ್ಯ ವಿಶಿಷ್ಟತೆಯಾಗಿದೆ.

ಈ ಮೇಲಿನ ಅಂಶಗಳ ಮುಖಾಂತರ ನಾವು ನಮ್ಮ ಕನ್ನಡದ ನ್ಯೂಸ್ ಚಾನಲ್‌ವೊಂದರ ಸುದ್ದಿಯನ್ನು ಪ್ರಸಾರ ಮಾಡುವ ನೈಜ ಬಗೆಯನ್ನು ಆ ಮೂಲಕ ಅಲ್ಲಿ ಬಳಕೆಯಾಗುವ ಸಾಮಾನ್ಯಕ್ಕಿಂತ ವಿಶೇಷ ಬಗೆಯ ಭಾಷಾ ಪ್ರಯೋಗ ಕುರಿತು ಒಂದು ವಾರ್ತಾ ಸಂಚಿಕೆಯನ್ನು ಅದರ ಪ್ರಾರಂಭದಿಂದ ಹಿಡಿದು ಮುಕ್ತಾಯದ ಹಂತದವರೆಗೂ ಕುರಿತು ವಿಶ್ಲೇಷಿಸೋಣ.

ಅಂತಹ ಹೊಸ ರೀತಿಯ ಪದಗಳು, ವಾಕ್ಯಗಳು ವಿಶೇಷಾರ್ಥಗಳು ನ್ಯೂಸ್ ಚಾನಲ್‌ಗಳು ಜನರನ್ನು ಆಕರ್ಷಿಸಲು ಹೇಗೆ ಪೈಪೋಟಿಯ ಮೇಲೆ ಪೈಪೋಟಿ ಮಾಡುತ್ತವೆ ಎಂಬುದಕ್ಕೆ ಈ ಕೆಳಗಿನ ಟಿ.ವಿ. ಕಾರ್ಯಕ್ರಮಗಳ ಪಟ್ಟಿಯನ್ನು ಮತ್ತು ಪದ ಬಳಕೆಯ ವಿಶಿಷ್ಟತೆ ಗಮನಿಸಬಹುದಾಗಿದೆ.

ಸಮೂಹ ಮಾಧ್ಯಮಗಳಲ್ಲಿ ಒಂದಾದ ದೂರದರ್ಶನದಲ್ಲಿ ಕಾರ್ಯಕ್ರಮದ ಹೆಸರುಗಳನ್ನು ಆಕರ್ಷಕವಾಗಿ ಅನ್ಯ ಭಾಷಾ ಪದಗಳನ್ನು ಬಳಸುವ ಮೂಲಕ ಭಾಷೆಯ ಸ್ವರೂಪ ವಿಶಿಷ್ಟತೆ ಕೆಳಗಿನಂತೆ ಕಾಣಬಹುದು.

ಉದಾಹರಣೆ:

- ಸಿನಿಮಾ ಕಾರ್ಯಕ್ರಮ ಕುರಿತಾದ ಹೆಸರುಗಳು
  ಸಿನಿಮಾ ಹಂಗಾಮಿ, ಫಿಲ್ಮಿ ಫಂಡಾ, ಫಿಲ್ಮೀ ದುನಿಯಾ, ಆಕ್ಷ್ಯನ್ ಕಟ್. ಸಿನಿ ಸಮಯ, ಟಾಪ್ ೧೦.

- ರಾಜಕೀಯ ಕುರಿತಾದ ಕಾರ್ಯಕ್ರಮದ, ಹೆಸರುಗಳು
  ಚಕ್ರವ್ಯೂಹ, ಜುಗಲ್‌ಬಂದಿ, ಮೆಗಾ ಫೈಟ್.

- ಕೊಲೆ ದರೋಡೆಗೆ ಸಂಬಂಧಿಸಿದಂತೆ
  ಕ್ರೈಂ ನ್ಯೂಸ್, ಕ್ರೈಂ ಡೈರಿ, ವಾರೆಂಟ್, ಕ್ರೈಂ ರಿಪೋರ್ಟರ್, ಸೂಪರ್ ಕಾಪ್, ಅಂಡರ್‌ವರ್ಲ್ಡ್.

- ಆಧ್ಯಾತ್ಮಿಕ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ
  ಬೃಹತ್ ಬ್ರಹ್ಮಾಂಡ, ಶುಭ ಮಂಗಳ, ದಿವ್ಯಜ್ಯೋತಿ, ಶುಭೋದಯ.

- ಆರೋಗ್ಯಕ್ಕೆ ಸಂಬಂಧಿಸಿದಂತೆ,
  ಸಂಜೀವಿನಿ, ಹೆಲ್ತ್‌ಕ್ಲಬ್, ಮಕ್ಕಳ ಕ್ಲಿನಿಕ್, ಆರೋಗ್ಯವೇ ಭಾಗ್ಯ, ಹೆಲ್ತ್ ಟಿಪ್ಸ್.

- ಅಡುಗೆಗೆ ಸಂಬಂಧಿಸಿದಂತೆ ಹೆಸರುಗಳು.
  ನಳಪಾಕ, ಕಿಚನ್ ಕಿಲಾಡಿಗಳು, ಸವಿರುಚಿ, ಅಡುಗೆ ಅರಮನೆ, ಬೊಂಬಾಟ್ ಭೋಜನ.

■ ಹಾಸ್ಯ ಮನೋರಂಜನೆಗೆ ಸಂಬಂಧಿಸಿದವು,
ಹಾಸ್ಯ ಚಕ್ರವರ್ತಿ, ಹಾಸ್ಯ ಸಾಮ್ರಾಟ್, ಕಾಮಿಡಿ ಕಿಲಾಡಿಗಳು, ನಗೆ ಹಬ್ಬ, ಹರಟೆ, ಅಹ್ಹಾಹ, ನಾನಾ–ನೀನಾ.

■ ಮಕ್ಕಳಿಗೆ ಸಂಬಂಧಿಸಿದ ಕಾರ್ಯಕ್ರಮಗಳು
ಸರಿಗಮಪ, ಎದೆತುಂಬಿ ಹಾಡುವೆನು, ಲಿಟಲ್ ಚಾಂಪ್ಸ್, ಚಿಲಿಪಿಲಿ

■ ವಿಸ್ಮಯ, ಭಯಾನಕ ವಿಷಯ ಕುರಿತಾದ ಕಾರ್ಯಕ್ರಮಗಳು.
ಇದು ಸತ್ಯ, ಹೀಗೂ ಉಂಟೇ, ವಿಸ್ಮಯ ಆಗೋಚರ, ಚಿದಂಬರ ರಹಸ್ಯ.

■ ಕ್ರೀಡೆಗಳಿಗೆ ಸಂಬಂಧಿಸಿದಂತೆ
ಸಿಕ್ಸರ್, ಬೌಂಡರಿಲೈನ್, ಐಪಿಎಲ್ ಹಂಗಾಮ, ಸ್ಪೋರ್ಟ್ಸ್ ಕ್ಲಬ್.

ಹಾಗೆಯೇ ಪ್ರತಿನಿತ್ಯವೂ ನಮ್ಮ ರಾಜ್ಯದಲ್ಲಿ, ದೇಶದಲ್ಲಿ ನಡೆಯುತ್ತಿರುವ ರಾಜಕೀಯ ಕ್ಷೇತ್ರದಿಂದ ಹಿಡಿದು, ಎಲ್ಲಾ ಕ್ಷೇತ್ರಗಳ ವಿಶೇಷ ವಿಸ್ಮಯ ಯೋಗ್ಯ, ಆಯೋಗ್ಯ, ಬಹಳ ಒಳ್ಳೆಯ ಮತ್ತು ಕೆಟ್ಟ ಬೆಳವಣಿಗೆಯ ಕುರಿತು ಸುದ್ದಿ ವಾಹಿನಿಗಳು ವಿಶೇಷ ಶಿರ್ಷಿಕೆಗಳನ್ನು ಕೊಟ್ಟು, ಆ ಕಾರ್ಯಕ್ರಮಕ್ಕೆ ತಕ್ಕಂತೆ ವಿಶಿಷ್ಟ ರೀತಿಯಲ್ಲಿ ಭಾಷೆಯನ್ನು ಬಳಸಿ, ಕಾರ್ಯಕ್ರಮ ನಡೆಸುತ್ತಾ ಆ ಒಂದು ವಿಷಯವು ಯಾವ ರೀತಿಯಲ್ಲಿ ಪ್ರಸಿದ್ಧವಾಗಿದೆ ಎಂದು ಹೇಳುವಲ್ಲಿ, ಆ ಕಾರ್ಯಕ್ರಮಗಳ ಶೀರ್ಷಿಕೆಯೂ ಬಹಳ ಆಕರ್ಷಕ ಮತ್ತು ಎಲ್ಲವನ್ನ ಹೇಳುತ್ತಿರುತ್ತವೆ. ಅಂತಹ ಶೀರ್ಷಿಕೆಗಳ ಹೆಸರುಗಳನ್ನ ಗಮನಿಸೋಣ.

"ಸಂಕಟ ಬಂದಾಗ ವೆಂಕಟರಮಣ"

"ರೇಣುಕಾ ಮಹಾತ್ಮೆ"

"ಲಕ್ಷ್ಮೀ ಪುತ್ರರು"

"ರೆಸಾರ್ಟ್ ರಾಜಕೀಯ"

"ಕೆಸರಿನಲ್ಲಿ ಕಮಲ"

"ಬ್ಲೇಡ್ ಬಾಬಾ"

"ನಿತ್ಯ ಲೀಲೆಗಳು"

"ನಡೆದಾಡುವ ದೇವರು"

"ಆಪರೇಷನ್ ಕಮಲ"

"ಖಳ ನಾಯಕ"

ಈ ರೀತಿಯ ಶೀರ್ಷಿಕೆ ಕೊಟ್ಟು ಕಾರ್ಯಕ್ರಮಗಳನ್ನು ನಡೆಸುವುದು ಜನರಿಗೆ ಕಾರ್ಯಕ್ರಮದ ಹೆಸರನ್ನು ಕೇಳಿದಾಗ ಕುತೂಹಲವಾಗಿ ಮತ್ತು ಆಕರ್ಷಕವಾಗಿಯೂ ಇರುತ್ತದೆ. ಈ ರೀತಿಯ ವಿಶಿಷ್ಟ ಭಾಷಾ ಪ್ರಯೋಗ ಜನರಿನ ಮಾನಸಿಕವಾಗಿ ಕುತೂಹಲವನ್ನು ಹುಟ್ಟಿಸಿ ಕಾರ್ಯಕ್ರಮವನ್ನು ವಿಕ್ಷೀಸುವ ಪ್ರವೃತ್ತಿಯನ್ನು ಹುಟ್ಟಿಸುತ್ತದೆ. ಹಾಗೆಯೇ ಜನರನ್ನು ವಾಕ್ಯ ಪ್ರಯೋಗದ ಮೂಲಕ ಸಮೂಹ ಮಾಧ್ಯಮಗಳ ಮುಂದೆ ಕೂರಿಸುವ ತಂತ್ರವು ಸಹ ಅಡಗಿರುತ್ತದೆ. ಈ ವಿಶಿಷ್ಟ ಭಾಷಾ ಪ್ರಯೋಗದ ಸಂದರ್ಭದಲ್ಲಿ ಅನ್ಯ ಭಾಷೆಗಳಾದ ಇಂಗ್ಲೀಷ್, ಸಂಸ್ಕೃತ, ಹಿಂದಿ ಇತ್ಯಾದಿ ಭಾಷೆಗಳಿಂದ ಪದಗಳನ್ನು ನೇರವಾಗಿ ಬಳಸುವ ಮತ್ತು ಅನುವಾದ ಮಾಡುವ ಮೂಲಕ ಭಾಷೆಯ ಪದ ಸಂಪತ್ತು ಹೆಚ್ಚಾಗುತ್ತದೆ. ಇದು ಭಾಷೆಯ ಬೆಳವಣಿಗೆಗೆ ಸಹಕಾರಿಯಾಗಿದೆ.

# ಸಮಾರೋಪ

ಭಾಷಾ ವಲಯದಲ್ಲಿ ಅಧ್ಯಯನಗಳು ಹಲವಾರು ವಿಭಿನ್ನಿ ವಿಶಿಷ್ಟ ರೀತಿಯಲ್ಲಿ ನಡೆದಿವೆ. ಅಂತಹ ಮಹತ್ವದ ಅಧ್ಯಯನಗಳಲ್ಲಿ, ಮಾಧ್ಯಮಗಳ ಭಾಷೆಯ ಅಧ್ಯಯನವೂ ಒಂದು. ಪತ್ರಿಕೆಯಲ್ಲಿ ಬಳಕೆಯಾಗುವ ಭಾಷೆ, ರೇಡಿಯೋ ಭಾಷೆ ಮತ್ತು ಟೆಲಿವಿಷನ್ ಭಾಷೆ. ಇವುಗಳ ಕುರಿತಾಗಿ ಅಧ್ಯಯನ ಮಾಡುವುದು ಭಾಷಾ ವಿಜ್ಞಾನಿಗಳ, ಭಾಷಾ ಅಧ್ಯಯನಕಾರರ ಬಹಳ ಮುಖ್ಯವಾದ ಕರ್ತವ್ಯವಾಗಿದೆ. ಈ ಮಾರ್ಗದಲ್ಲಿ ಅನೇಕ ಅಧ್ಯಯನಗಳು ನಡೆದಿವೆ. ನಡೆಯುತ್ತಲೂ ಇವೆ. ಕಾಲದಿಂದ ಕಾಲಕ್ಕೆ ಅಧ್ಯಯನಗಳು ನಡೆಯುತ್ತಲೇ ಇವೆ. ಆದರೂ ಸಹ ಭಾಷಾ ಕ್ಷೇತ್ರ ನಿಂತ ನೀರಾಗಿರದೆ, ಚಲನಶೀಲವಾದುದರಿಂದ ಅಧ್ಯಯನ ನಡೆಯುವುದು, ನಡೆಸುವುದು ಮುಖ್ಯವಾಗಬೇಕಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಸಮೂಹ ಮಾಧ್ಯಮಗಳಲ್ಲಿ ಒಂದಾದ ದೂರದರ್ಶನದಲ್ಲಿನ ಭಾಷೆಯ ಕುರಿತಾಗಿ ಅದರಲ್ಲೂ ವಿಶೇಷವಾಗಿ ಸುದ್ದಿ ವಾಹಿನಿಗಳ ಭಾಷೆ ಕುರಿತಾಗಿ ಚರ್ಚೆ ಮಾಡಲಾಗಿದೆ.

ದೂರದರ್ಶನದ ಕನ್ನಡ ವಾಹಿನಿಗಳಲ್ಲಿ ಪ್ರಸಾರವಾಗುವ ಸುದ್ದಿಗಳನ್ನಷ್ಟೇ ಗಮನಿಸಲಾಗಿದೆ. ಭಾಷಾಧ್ಯಯನಕ್ಕೆ ಆಯ್ಕೆ ಮಾದರಿಯಲ್ಲಿ ಕೆಲವೊಂದು ಸುದ್ದಿ ಮಾದರಿಗಳನ್ನು ಇಟ್ಟುಕೊಂಡು ವಿಶ್ಲೇಷಿಸಲಾಗಿದೆ. ಕನ್ನಡ – ಇಂಗ್ಲೀಷ್ ದ್ವಿಭಾಷಿಕ ಸಂದರ್ಭದಲ್ಲಿ ಮಾಧ್ಯಮದ ಭಾಷೆ. ಭಾಷಾ ಸ್ವೀಕರಣವಾಗುವುದನ್ನು ನೋಡುತ್ತೇವೆ. ಅದರಲ್ಲೂ ಟಿ.ವಿ.ಯಲ್ಲಿ ನಿರೂಪಕರು ಮತ್ತು ಸುದ್ದಿ ವಾಚಕರು, ವರದಿಗಾರರು ಬಳಸುವ ಭಾಷೆ ವಿಶಿಷ್ಟವಾದದ್ದು, ಸಂವಹನಕ್ಕೋಸ್ಕರ ಹೊಸ ಬಗೆಯ ಭಾಷೆಯನ್ನು ಹೇಗೆ ಬಳಸುತ್ತಿದ್ದಾರೆ ಎಂದು ಪ್ರಸ್ತುತ ಅಧ್ಯಯನವನ್ನು ಪ್ರಮುಖವಾಗಿ ಐದು ಅಧ್ಯಾಯಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಆರನೆಯದಾಗಿ ಸಮಾರೋಪ ಮಾಡಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶ ಮತ್ತು ಲಕ್ಷಣವನ್ನು ವಿವರಿಸಲಾಗಿದೆ. ಹಾಗೂ ಅಧ್ಯಯನಕ್ಕೆ ಬಳಸುವ ವಿಧಾನವನ್ನು ಮತ್ತು ವ್ಯಾಪ್ತಿಯನ್ನು ವಿವರಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಮಾಧ್ಯಮದ ಹುಟ್ಟು ಮತ್ತು ಬೆಳವಣಿಗೆಯನ್ನು ಕುರಿತು ವಿವರಿಸಲಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ಮಾಧ್ಯಮಗಳ ಪರಿಚಯ ಮತ್ತು ಮಹತ್ವ, ಪ್ರಯೋಜನದ ಕುರಿತು ಇಲ್ಲಿ ಗಮನಹರಿಸಲಾಗಿದೆ. ಮಾಧ್ಯಮಗಳು ಮತ್ತು ಸಮಾಜದ ನಡುವಿನ ಸಂಬಂಧವನ್ನು ಹುಟ್ಟು ಮತ್ತು ಬೆಳವಣಿಗೆಯ ಚರ್ಚೆಯ ಮೂಲಕ ಕಂಡುಕೊಳ್ಳಲಾಗಿದೆ.

ಮೂರನೇ ಅಧ್ಯಾಯದಲ್ಲಿ ಸಮೂಹ ಮಾಧ್ಯಮಗಳ ಭಾಷಾ ಸ್ವೀಕರಣದ ಬಗ್ಗೆ ತಿಳಿಸಲಾಗಿದೆ. ಭಾಷಾ ಸ್ವೀಕರಣದ ಬಗ್ಗೆ ವಿದ್ವಾಂಸರ ಕೃತಿಗಳ ಓದಿ, ಬಳಸಲಾಗಿದೆ. ೧ ೨ ೩

ನಾಲ್ಕನೇ ಅಧ್ಯಯನದಲ್ಲಿ ದೂರದರ್ಶನದ ಕನ್ನಡ ವಾಹಿನಿಗಳಲ್ಲಿ ಪ್ರಸಾರವಾಗುವ ಸುದ್ದಿಯ ಭಾಷಾ ಬಳಕೆಯನ್ನು ಕುರಿತು ಚರ್ಚಿಸಲಾಗಿದೆ. ಧ್ವನಿರಚನೆ, ಪದರಚನೆ, ಮತ್ತು ವಾಕ್ಯ ರಚನೆಯನ್ನು ಗಮನಿಸಲಾಗಿದೆ. ಭಾಷಾ ವಿಶಿಷ್ಟತೆಯನ್ನು ಗುರುತಿಸಲಾಗಿದೆ. ಇಲ್ಲಿ ಕೇವಲ ಭಾಷೆ ಅಷ್ಟೆ ಅಲ್ಲದೆ ಶೈಲಿಯನ್ನು ವಾಚನ ವಿಧಾನ ಗಮನಾರ್ಹವಾಗಿದೆ. ರಚನೆ ಮತ್ತು ಬಳಕೆ ದೃಷ್ಟಿಯಿಂದ ವಿಶಿಷ್ಟವಾಗಿದೆ. ಆದ್ದರಿಂದಲೇ ನ್ಯೂಸ್‌ನಲ್ಲಿ ಭಾಷೆ ವೀಕ್ಷಕನಿಗೆ ಸಂವಹನಗೊಳ್ಳುವಲ್ಲಿ ಯಶಸ್ವಿಯಾಗಿ ಅಧ್ಯಯನದಲ್ಲಿ ಕಂಡು ಬರುತ್ತದೆ.

ಐದನೇ ಅಧ್ಯಾಯದಲ್ಲಿ ಮಾಧ್ಯಮಗಳ ಭಾಷೆ ಸ್ವರೂಪದ ಬಗ್ಗೆ ವಿಶ್ಲೇಷಿಸಲಾಗಿದೆ. ಮಾಧ್ಯಮಗಳು ಯಾವ ರೀತಿಯ ಭಾಷೆಯನ್ನು ಬಳಸುತ್ತಿವೆ. ಮಾಧ್ಯಮದ ಭಾಷೆ ಯಾವುದು? ಮತ್ತು ಸಮೂಹ ಮಾಧ್ಯಮಗಳ ಭಾಷೆಯ ಸ್ವರೂಪದ ಬಗ್ಗೆ ಚರ್ಚಿಸಲಾಗಿದೆ.

ಅನುಬಂಧ ಭಾಗದಲ್ಲಿ ಸುದ್ದಿಯಲ್ಲಿ ಬಳಕೆಯಾದ ಇಂಗ್ಲೀಷ್ ಪದಗಳ ಮತ್ತು ಕನ್ನಡ ಪದವನ್ನು ಪರಭಾಷೆಗಳಿಗೆ ದಾಖಲಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಸುದ್ದಿನಲ್ಲಿ ಬಳಕೆಯಾದ ಪದಗಳಿಗೆ ನಿಘಂಟಿನ ಅರ್ಥವನ್ನು ನೀಡದೆ ಸಾಂದರ್ಭಿಕ ಅರ್ಥವನ್ನು ನೀಡಲಾಗಿದೆ. ಇದರಿಂದ ಒಂದು ನಿರ್ದಿಷ್ಟ ವಲಯದ ಪದಗಳೂ ಮತ್ತೊಂದು ವಲಯದಲ್ಲಿ ಬಳಕೆಯನ್ನು ಗುರುತಿಸಬಹುದಾಗಿದೆ.

ಒಟ್ಟಿನಲ್ಲಿ ಸುದ್ದಿ ಭಾಷೆ, ಟಿ.ವಿ. ಮಾಧ್ಯಮದಲ್ಲಿ ವಿಶಿಷ್ಟವಾಗಿದೆ. ಇದಕ್ಕೆ ಕಾರಣಗಳು ಹಲವು. ಅಲ್ಲಿ ವಿಶಿಷ್ಟವಾದ ಧ್ವನಿಗಳು ರಚನೆಯಾಗುತ್ತದೆ. ಆ ಧ್ವನಿಯನ್ನು, ಕೇಳುಗರನ್ನು ಆಕರ್ಷಿಸಲು ಕಾರಣವಾಗಿದೆ. ಹಾಗೂ ಅನ್ಯ ಭಾಷಾ ಪದವನ್ನು ಮತ್ತು ವಾಕ್ಯಗಳು ಸ್ವೀಕರಣವಾಗಿರುವುದರಿಂದ ಭಾಷೆ ವಿಭಿನ್ನವಾಗಿ ವಿಶಿಷ್ಟವಾಗಿ ಬಳಕೆಯಾಗುತ್ತಿವೆ. ಅದು ಸಂವಹನಗೊಳಿಸುವಲ್ಲಿ ಪ್ರೇರಕವಾಗಿದೆ. ಧ್ವನಿ ನಿಯಮ, ಪದ ರಚನಾ ನಿಯಮ ಹಾಗೂ ವಾಕ್ಯ ರಚನಾ ನಿಯಮ ಹೊಸ ಬಗೆಯಾಗಿ ಕಂಡು ಬರುತ್ತದೆ. ಈ ಅಂಶಗಳೇ ಭಾಷೆಯ ಬದಲಾವಣೆಯನ್ನು ಸೂಚಿಸುತ್ತದೆ. ಇದು ಭಾಷಾ ಬೆಳವಣಿಗೆಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಟಿ.ವಿ.ಯಲ್ಲಿ ಪ್ರಸಾರವಾಗುವ ಸುದ್ದಿ ಭಾಷೆ ಒಂದು ಪ್ರಭೇದವಾಗಿದೆ. ಎಂಬುದು ಪ್ರಸ್ತುತ ಅಧ್ಯಯನದ ಮೂಲಕ ತಿಳಿಯುತ್ತದೆ.

---

ಅಡಿ ಟಿಪ್ಪಣಿ: ೧, ೨, ೩

ಡಾ॥ ಎಂ. ಚಿಂದಾನಂದ ಮೂರ್ತಿ – ಭಾಷಾ ವಿಜ್ಞಾನದ ಮೂಲತತ್ವಗಳು

ಡಾ॥ ಹಂಪ ನಾಗರಾಜಯ್ಯ – ದ್ರಾವಿಡ ಭಾಷಾ ವಿಜ್ಞಾನ.

ಡಾ॥ ಕೆ.ವಿ. ನಾರಾಯಣ – ಕನ್ನಡ ವಿಶ್ವವಿದ್ಯಾನಿಲಯದ ವಿಶ್ವಕೋಶ ಭಾಷೆ–೧.

## ಇಂಗ್ಲೀಷ್ ಪದಕೋಶ

| | | |
|---|---|---|
| ೧) ಫೇರ್ ಪ್ಲೇ | – | ಶಿಸ್ತಿನ ಆಟ, ಜವಾಬ್ದಾರಿಯುತ ಆಟ |
| ೨) 'ಡೈ' | – | ಕಾಲಿಗೆ ಬೀಳುವುದು |
| ೩) ಸೆಲೆಬ್ರೇಷನ್ | – | ವಿಜಯೋತ್ಸವದ ಆಚರಣೆ |
| ೪) ಫೇಲ್ | – | ಅನುತ್ತೀರ್ಣ, ನಾಪಾಸ್ |
| ೫) ಅರೆಸ್ಟ್ | – | ಬಂಧಿಸು |
| ೬) ಆ್ಯಕ್ಟ್ | – | ಕಾಯಿದೆ, ಕಾನೂನು |
| ೭) ಓನ್ ಬಿಜಿನೆಸ್ | – | ಸ್ವಂತ ವ್ಯವಹಾರ |
| ೮) ಔಟ್ ಗೋಯಿಂಗ್ | – | ಹೊರಗಡೆಯಲ್ಲಿ, ಹೊರ ಹೋಗುವ |
| ೯) ಕ್ರಿಮಿನಲ್ | – | ಅಪರಾಧಿ |
| ೧೦) ಕೇಸ್ | – | ಪ್ರಕರಣ |
| ೧೧) ಕೋರ್ಟ್ | – | ನ್ಯಾಯಾಲಯ, ನ್ಯಾಯಸ್ಥಾನ |
| ೧೨) ಗನ್ | – | ಬಂದೂಕು |
| ೧೩) ಚಾಲೇಂಜ್ | – | ಹಠ, ಪಣ ತೊಡುವುದು |
| ೧೪) ಡೀಲ್ | – | ವ್ಯವಹಾರ |
| ೧೫) ಡೈರಿ | – | ದಿನಚರಿ |
| ೧೬) ಡೈಲಿ | – | ದಿನಾಲು, ಪ್ರತಿದಿನ |
| ೧೭) ಹೈಟೆಕ್ | – | ಹೆಚ್ಚಿನ ತಂತ್ರಜ್ಞಾನ, ನವೀನ ತಂತ್ರಜ್ಞಾನ |
| ೧೮) ಹೈಟೆಕ್ ಮಾಡೆಲ್ | – | ನವೀನ ತಂತ್ರಜ್ಞಾನದ ಮಾದರಿ |
| ೧೯) ನಕ್ಸಲೈಟ್ | – | ನಕ್ಸಲ್‌ವಾದಿಗಳು |
| ೨೦) ಪಾಲಿಟಿಕ್ಸ್ | – | ರಾಜಕಾರಣ, ರಾಜಕೀಯ |
| ೨೧) ಫಿಗರ್ | – | ಚೆಂದಾದ ಬೆಡಗಿ, ಸುಂದರವಾದ ಹುಡುಗಿ |
| ೨೨) ಫಿಟ್ಟಿಂಗ್ | – | ಪರಸ್ಪರ ಜಗಳ ಹಚ್ಚುವುದು, ಚಾಡಿ ಹೇಳುವುದು. |
| ೨೩) ಗನ್‌ಮ್ಯಾನ್ | – | ಬಂದೂಕು ಧಾರಿ, ಅಂಗ ರಕ್ಷಕ |

| | | |
|---|---|---|
| ೨೪) ಬೇಜಾನ್ | – | ಸಾಕಷ್ಟು, ಬಹಳವಾದ |
| ೨೫) ಮಾರ್ಕೆಟ್ | – | ಸಂತೆ |
| ೨೬) ರೈಡ್ | – | ದಾಳಿ |
| ೨೭) ರಿಮ್ಯಾಂಡ್ ಹೋಮ್ | – | ಸೆರೆಮನೆ |
| ೨೮) ರಾಬರಿ | – | ದರೋಡೆ ಕೋರ |
| ೨೯) ರಾಬರಿಂಗ್ | – | ದರೋಡೆ, ಲೂಟಿ |
| ೩೦) ನೆಟ್‌ವರ್ಕ್ | – | ಸಂಪರ್ಕ ಜಾಲ |
| ೩೧) ರೋಲ್‌ಕಾಲ್ | – | ಹಣ ವಸೂಲಿ ಮಾಡುವುದು |
| ೩೨) ಲವ್‌ಕೇಸ್ | – | ಪ್ರೇಮ ಪ್ರಕರಣ |
| ೩೩) ಲಾಯರ್ | – | ವಕೀಲ, ನ್ಯಾಯವಾದಿ |
| ೩೪) ಲೋಡ್ | – | ತುಂಬು, ಭರ್ತಿ ಮಾಡು |
| ೩೫) ಸೆಕ್ಸಿ | – | ಕಾಮುಕಿ |
| ೩೬) ಎಸ್ಕೇಪ್ | – | ಪರಾರಿಯಾಗು, ಓಡಿ ಹೋಗುವುದು, ಪಾರಾಗು |

## ಟಿ.ವಿ. ೯ ವಾಹಿನಿಯಲ್ಲಿ ಪ್ರಸಾರವಾದ ನ್ಯೂಸ್‌ನ ಮಾದರಿ

ದಿನಾಂಕ: ೨೫/೦೫/೨೦೧೨
ಸಮಯ: ರಾತ್ರಿ ೧೦ ಗಂಟೆಗೆ

ನ್ಯೂಸ್ ಚಾನಲ್‌ನಲ್ಲಿ ಒಬ್ಬ ವ್ಯಕ್ತಿ ಸುದ್ದಿಯನ್ನು ಓದುತ್ತಿರುವುದನ್ನು ನೇರವಾಗಿ ತೆಗೆದುಕೊಳ್ಳುವುದರ ಮೂಲಕ ಗಮನಿಸುವುದಾದರೆ.

**ನಿರೂಪಕ:** ನಮಸ್ಕಾರ  ಟಿ.ವಿ. ನೈನ್‌ಗೆ ಸ್ವಾಗತ ನಾನು ರೆಹಮಾನ್. ಈಗ ಮುಖ್ಯಾಂಶಗಳು.

- ಬಿ.ಜೆ.ಪಿ. ಕಾರ್ಯಕಾರಣಿ ಸಭೆಗೆ ಗೈರುಹಾಜರಾದ ಅಡ್ವಾಣಿ ಮತ್ತು ಸುಷ್ಮಾ ಸ್ವರಾಜ್. ವರಿಷ್ಟರಲ್ಲೂ ಮುಸುಕಿನ ಗುದ್ದಾಟ.
- ಗಣಿ ಕಪ್ಪ ಹಗರಣ ಸಿ.ಬಿ.ಐ.ನಿಂದ ಬಂಧನದ ಭೀತಿಯಲ್ಲಿ ಯಡಿಯೂರಪ್ಪ.
- ರಾಜ್ಯ ಪೊಲೀಸ್ ಮಹಾನಿರ್ದೇಶಕ ಹುದ್ದೆಗಾಗಿ ಕಿತ್ತಾಟ ತೀರ್ಪು ೨೮ರಂದು ಪ್ರಕಟ.
- ಪೆಟ್ರೋಲ್ ಬೆಲೆ ಏರಿಕೆ ವಿರುದ್ಧ ರಾಜ್ಯದ ಹಲವು ಕಡೆ ಪ್ರತಿಭಟನೆ ರಸ್ತೆ ತಡೆ.
- ಐ.ಪಿ.ಎಲ್. ಕ್ರಿಕೆಟ್ ಕದನ, ಫೈನಲ್ ತಲುಪಿದ ಧೋನಿ ಪಡೆ, ಮತ್ತೇ ಚಾಂಪಿಯನ್ ಆಗುವತ್ತ ಧೋನಿ ಚಿತ್ತ.

**ವಾರ್ತೆಯ ಸಂಕ್ಷಿಪ್ತ:**

ಮುಂಬೈನಲ್ಲಿ ನಡೆದ ಎರಡು ದಿನಗಳ ಬಿ.ಜೆ.ಪಿ. ರಾಷ್ಟ್ರೀಯ ಕಾರ್ಯಕಾರಿಣಿಯ ಅಂತ್ಯದಲ್ಲಿ ನಡೆಯುವ ಸಾಂಪ್ರದಾಯಿಕ ಸಾರ್ವಜನಿಕ ಸಭೆಯಲ್ಲಿ ಪಕ್ಷದ ಹಿರಿಯ ನಾಯಕ ಎಲ್.ಕೆ. ಅಡ್ವಾಣಿ ಹಾಗೂ ಸುಷ್ಮಾ ಸ್ವರಾಜ್ ಸಭೆಯಿಂದ ದೂರ ಉಳಿಯುವ ಮೂಲಕ ಪಕ್ಷದಲ್ಲಿ ಎಲ್ಲವೂ ನೆಟ್ಟಗಿಲ್ಲ ಎನ್ನುವ ಸಂಕೇತ ನೀಡಿದ್ದಾರೆ. ಪಕ್ಷದಲ್ಲಿ ಒಮ್ಮೆ ಅಧ್ಯಕ್ಷರಾದವರು ತಮ್ಮ ಅವಧಿ ಮುಗಿದ ನಂತರ ಹುದ್ದೆಯಲ್ಲಿ ಮುಂದುವರಿಯದೆ ಇತರ ನಾಯಕರಿಗೆ ಆ ಹುದ್ದೆ ಬಿಟ್ಟು ಕೊಡುವುದು ಸಂಪ್ರದಾಯವಾಗಿತ್ತು. ಆದರೆ ಈ ಬಾರಿ ರಾಷ್ಟ್ರೀಯ ಅಧ್ಯಕ್ಷ ಸ್ಥಾನಕ್ಕೆ ತಿದ್ದುಪಡಿ ತರಲಾಗಿದ್ದು, ಇದು ಮತ್ತೊಮ್ಮೆ ಗಡ್ಕರಿಯವರನ್ನು ಅಧ್ಯಕ್ಷರನ್ನಾಗಿ ಮುಂದುವರೆಸುವ ಕೆಲವರ ತಂತ್ರ ಎನ್ನಲಾಗಿದೆ. ದೇಶದಲ್ಲಿ ಬಿ.ಜೆ.ಪಿ. ಆಡಳಿತ ವಿರುದ್ಧ ಕರ್ನಾಟಕ, ಗೋವಾ, ಮಧ್ಯಪ್ರದೇಶ, ಗುಜರಾತ್ ಸೇರಿದಂತೆ ಹಲವು ರಾಜ್ಯಗಳಲ್ಲಿ ಮಿತಿ ಮೀರಿದ ಭಷ್ಟಾಚಾರ ಪಕ್ಷಭೇದ ಚಟುವಟಿಕೆಗಳು, ಅಶಿಸ್ತಿನ ನಡವಳಿಕೆ ಸ್ವಹಿತಾಸಕ್ತಿಗಳು ಇಂತಹ ಅನೇಕ ಪಕ್ಷ ವಿರೋಧಿ ಚಟುವಟಿಕೆಗಳನ್ನು ಸರಿಯಾದ ಸಮಯದಲ್ಲಿ ಹತ್ತಿಕ್ಕಲಾಗದೆ, ಸಮರ್ಥವಾಗಿ ಈ ಜವಾಬ್ದಾರಿ ನಿಭಾಯಿಸದೆ, ಈ ದೇಶದಲ್ಲಿ ಬಿ.ಜೆ.ಪಿ.ಯ ಬಗ್ಗೆ ಜನರಿಗೆ ಕೆಟ್ಟ ಭಾವನೆ ಮಾಡುತ್ತಿರುವಾಗ ಮತ್ತೆ ಗಡ್ಕರಿ ಅವರು ಹುದ್ದೆಯಲ್ಲಿ ಮುಂದುವರಿಯುವುದು ಪಕ್ಷದಲ್ಲಿ ಶಿಸ್ತಿನ ಸಿಪಾಯಿ ಎಂದೇ ಹೆಸರಾದ ಅಡ್ವಾಣಿಗೆ ಇದು ಇಷ್ಟವಿಲ್ಲ ಎಂದು ಹೇಳಲಾಗುತ್ತಿದೆ.

ರಾಜ್ಯ ಪೊಲೀಸ್ ಮಹಾನಿರ್ದೇಶಕರ ಹುದ್ದೆ ಯಾರಿಗೆ ಒಲಿಯಲಿದೆ ಎಂಬ ವಿಷಯಕ್ಕೆ ಸೋಮವಾರ ತೆರೆ ಬೀಳಲಿದೆ. ಶಂಕರ ಬಿದರಿಯವರು ವೀರಪ್ಪನನ್ನು ಬಂಧಿಸುವ ಸಲುವಾಗಿ ರಚನೆಯಾಗಿದ್ದ ವಿಶೇಷ ಕಾರ್ಯ ಪಡೆಯ ಮುಖ್ಯಸ್ಥರಾಗಿದ್ದಾಗ, ಕರ್ನಾಟಕ ಮತ್ತು ತಮಿಳುನಾಡು ಗಡಿಯಂಚಿನ ಅರಣ್ಯ ಭಾಗಗಳಲ್ಲಿ ಬಿದರಿ ಅಲ್ಲಿನ ಅರಣ್ಯ ವಾಸಿಗಳ ಜನರ ಮತ್ತು ಗ್ರಾಮಸ್ಥರು ಮುಖ್ಯವಾಗಿ ಮಹಿಳೆಯ ಮೇಲೆ ವಿಚಾರಣೆ ನೆಪದಲ್ಲಿ ದೌರ್ಜನ್ಯ ಮತ್ತು ಹಿಂಸೆ ನೀಡಿದ್ದಾರೆ ಎಂಬ ಪ್ರಮುಖ ಆರೋಪದ ಕಾರಣ ಹೈಕೋರ್ಟ್ ಬಿದರಿ ಈ ಅತ್ಯುನ್ನತ ಸ್ಥಾನಕ್ಕೆ ಅರ್ಹರಲ್ಲ ಎಂದು ತೀರ್ಮಾನಿಸಿ ಅವರ ಸ್ಥಾನ ಅಸಿಂಧುಗೊಳಿಸಿತ್ತು. ಆದರೆ ಮತ್ತೆ ಸುಪ್ರೀಂ ಮೊರೆ ಹೋದ ಬಿದರಿ ತಡೆಯಾಜ್ಞೆ ತಂದು ಈ ವಿಚಾರವನ್ನು ಹೈಕೋರ್ಟ್‌ನಲ್ಲೆ ಬಗೆಹರಿಸಿಕೊಳ್ಳುವಂತೆ ನೀಡಿದ ಸೂಚನೆಗೆ ಬಿದರಿ ಈಗ ಮತ್ತೇ ಹೈಕೋರ್ಟ್ ಮೆಟ್ಟಿಲೇರಿ ಮತ್ತು ವಿಚಾರಣೆ ನಡೆದು ಅದರ ತೀರ್ಪು ಇದೇ ಸೋಮವಾರ ೨೮ರಂದು ಪ್ರಕಟವಾಗಲಿದ್ದು ಈ ಹುದ್ದೆ ಈ ಹಿರಿಯ ಐ.ಪಿ.ಎಸ್. ಅಧಿಕಾರವನ್ನು ಯಾರ ಪಾಲಾಗಲಿದೆ ಎಂಬುದು ಕಾದು ನೋಡ ಬೇಕಾಗಿದೆ.

ಯಾರು ಗೆಲ್ಲುತ್ತಾರೆ ಎಂಬ ಕೋಟ್ಯಾಂತರ ಭಾರತೀಯರ ಹೃದಯ ಬಡಿತ ಹೆಚ್ಚಿಸಿದ್ದ ಐ.ಪಿ.ಎಲ್. ಕ್ರಿಕೆಟ್ ಟೂರ್ನಿಯ ಚೆನ್ನೈ ಮತ್ತು ಡೆಲ್ಲಿ ಡೇರ್ ಡೆವಿಲ್ಸ್ ನಡುವಿನ ಪಂದ್ಯದಲ್ಲಿ ಚೆನ್ನೈ ಸೂಪರ್‌ಕಿಂಗ್ಸ್ ನೀಡಿದ ೨೨೨ ರನನ್ನು ಬೃಹತ್ ಸವಾಲು ಮುಟ್ಟಲಾರದೆ ಸೆಹ್ವಾಗ್ ನಾಯಕತ್ವದ ಡೆಲ್ಲಿ ಡೇರ್ ಡೆವಿಲ್ಸ್ ೧೩೬ ರನ್‌ಗಳಿಗೆ ಆಲೌಟ್ ಆಗುವ ಮೂಲಕ ಚೆನ್ನೈ ಸೂಪರ್ ಕಿಂಗ್ಸ್ ಫೈನಲ್ ತಲುಪಿತು.

ಮೊದಲ ಬ್ಯಾಟ್ ಮಾಡಿದ ಧೋನಿ ಬಳಗ ಆರಂಭಿಕ ಬ್ಯಾಟ್ಸ್‌ಮಾನ್‌ಗಳಾದ ಮುರಳಿ, ವಿಜಯ್ ಈ ಪಂದ್ಯದಲ್ಲಿ ಅಕ್ಷರಶಃ ಘರ್ಜಿಸಿದರು. ಮುರಳಿ ದೆಹಲಿಯ ಎಲ್ಲಾ ಬೌಲರ್‌ಗಳನ್ನು ಮನ ಬಂದತೆ ಚಚ್ಚಿ ಐ.ಪಿ.ಎಲ್. ಟೂರ್ನಿಯ ತಮ್ಮ ಮೊದಲ ಶತಕ ದಾಖಲಿಸಿ ಚೆನ್ನೈ ತಂಡ ಬೃಹತ್ ಮೊತ್ತ ಪೇರಿಸಲು ಕಾರಣಕರ್ತರಾದರು. ನಂತರ ಮುರಳಿಗೆ ತಕ್ಕ ಸಾಥ್ ಕೊಟ್ಟ ಸುರೇಶ್ ರೈನಾ ಮತ್ತು ನಾಯಕ ಧೋನಿ ವೇಗವಾದ ರನ್ ಗಳಿಕೆಗೆ ಮುಂದಾಗಿ ಚೆನ್ನೈನ ಅಭಿಮಾನಿಗಳನ್ನು ರಂಜಿಸಿದರು.

ಚನ್ನೈ ನೀಡಿದ ಸವಾಲನ್ನು ಎದುರಿಸಲು ಬಂದ ದೆಹಲಿ ತಂಡ ಆರಂಭದಲ್ಲಿ ರನ್ ಗಳಿಸಲು ಪರದಾಡಿತ್ತು. ಮಹೇಲ ಜಯವರ್ಧನೆ ಏಕಾಂಗಿಯಾಗಿ ಹೋರಾಟ ಮಾಡುತ್ತ ರನ್ ಗಳಿಸುತ್ತಾ ಸಾಗಿದರೆ, ತಂಡದ ನಾಯಕ ಸೆಹ್ವಾಗ್ ಸೇರಿದಂತೆ ಪ್ರಮುಖ ಬ್ಯಾಟ್ಸ್‌ಮನ್‌ಗಳಾದ ಡೇವಿಡ್ ವಾರ್ನರ್, ರಾಸ್ ಟೇಲರ್ ಉತ್ತಮ ಅಡಿಪಾಯ ಹಾಕಲು ವಿಫಲರಾದರು ಮತ್ತು ಇತರ ಬ್ಯಾಟ್ಸ್‌ಮನ್‌ಗಳು ಪೆವಿಲಿಯನ್ ಪೇಡೆರ್ ನಡೆಸಿದರು. ದೆಹಲಿ ತಂಡವನ್ನು ಮಣಿಸುವ ಮೂಲಕ ಚೆನ್ನೈ ತಂಡ ಐ.ಪಿ.ಎಲ್. ಕ್ರಿಕೆಟ್ ಟೂರ್ನಿಯ ಕೋನೆಯ ಹಂತ ಅಂದರೆ, ಫೈನಲ್ ತಲುಪಿತು. ಫೈನಲ್ ಭಾನುವಾರ ನಡೆಯಲಿದ್ದು, ಕಳೆದ ಬಾರಿಯ ಚಾಂಪಿಯನ್ ಚೆನ್ನೈನ ಮತ್ತು ಈ ಬಾರಿ ಪ್ರಶಸ್ತಿ ಗೆಲ್ಲುವ ಉತ್ಸಾಹದಲ್ಲಿರುವ ಶಾರುಖ್ ಒಡೆತನದ ಕೋಲ್ಕತ್ತಾ ನೈಟ್ ರೈಡರ್ಸ್ ತಂಡಗಳು ಮುಖಾಮುಖಿಯಾಗಲಿವೆ.

ಕೊನೆಯಲ್ಲಿ ಮತ್ತೊಮ್ಮೆ ಮುಖ್ಯಾಂಶಗಳು:

- ಬಿ.ಜೆ.ಪಿ. ಕಾರ್ಯಕಾರಣಿ ಸಭೆಗೆ ಗೈರು ಹಾಜರಾದ ಅಡ್ವಾಣಿ ಮತ್ತು ಸುಷ್ಮಾ ಸ್ವರಾಜ್ ವರಿಷ್ಠರಲ್ಲೂ ಮುಸುಕಿನ ಗುದ್ದಾಟ.
- ಗಣಿ ಕಪ್ಪ ಹಗರಣ ಸಿ.ಬಿ.ಐ. ನಿಂದ ಬಂಧನದ ಭೀತಿಯಲ್ಲಿ ಯಡಿಯೂರಪ್ಪ.
- ರಾಜ್ಯ ಪೊಲೀಸ್ ಮಹಾನಿರ್ದೇಶಕ ಹುದ್ದೆಗಾಗಿ ಕಿತ್ತಾಟ ತೀರ್ಪು ೨೮ರಂದು ಪ್ರಕಟ.
- ಪೆಟ್ರೋಲ್ ಬೆಲೆ ಏರಿಕೆ ವಿರುದ್ಧ ರಾಜ್ಯದ ಹಲವು ಕಡೆ ಪ್ರತಿಭಟನೆ ರಸ್ತೆ ತಡೆ.
- ಐ.ಪಿ.ಎಲ್. ಕ್ರಿಕೆಟ್ ಕದನ, ಫೈನಲ್ ತಲುಪಿದ ಧೋನಿ ಪಡೆ, ವಂದನೆಗಳು
- ಕ್ಷಣ ಕ್ಷಣದ ಸುದ್ದಿಗಾಗಿ ನೋಡ್ತಾ ಇರಿ ಟಿ.ವಿ. ೯.

**ಕನ್ನಡ ವಾಹಿನಿಯ ಸುವರ್ಣ ನ್ಯೂಸ್ ೨೪ x ೭ ನ ಮಾದರಿ ಓದು**

ದಿನಾಂಕ: ೨೮/೦೫/೨೦೧೨
ಸಮಯ: ಬೆಳಿಗ್ಗೆ: ೮.೩೦

ನಮಸ್ಕಾರ ಸುವರ್ಣ ನ್ಯೂಸ್‌ಗೆ ಸ್ವಾಗತ. ನಾನು ಶ್ವೇತಾ ಆಚಾರ್ಯ, ಈಗ ಹೆಡ್‌ಲೈನ್ಸ್
(ಗಟ್ಟಿಧ್ವನಿಯಲ್ಲಿ ಅಥವಾ ಏರುಧ್ವನಿಯಲ್ಲಿ)

- ಮತ್ತೇ ಸರ್ಕಾರದ ವಿರುದ್ಧ ಯಡಿಯೂರಪ್ಪ ಸಿಟ್ಟು, ಸಿ.ಇ.ಸಿ. ಗೆ ಹೊಸದಾಗಿ ವರದಿ ಸಲ್ಲಿಸಲು ಬಿಗಿಪಟ್ಟು
- ಶಾಸಕ ಎಂ. ಶ್ರೀನಿವಾಸ್ ಮನೆಯ ಮೇಲೆ ಲೋಕಾಯುಕ್ತ ದಾಳಿ, ಅಪಾರ ಪ್ರಮಾಣದ ಹಣ, ಚಿನ್ನಾಭರಣ, ದಾಖಲೆ ವಶ.
- ಪೆಟ್ರೋಲ್ ಬೆಲೆ ಏರಿಸಿರುವ ಕೇಂದ್ರದ ವಿರುದ್ಧ ಸಿಟ್ಟು, ಎನ್.ಡಿ.ಎ. ಯಿಂದ 'ಭಾರತ್ ಬಂದ್' ಗೆ ಕರೆ ಕೊಡುವ ಎಚ್ಚರಿಕೆ.
- ನಾಳೆ ಐ.ಪಿ.ಎಲ್. ಮಹಾ ಕದನ ಹ್ಯಾಟ್ರಿಕ್ ಪ್ರಶಸ್ತಿ ಗೆಲುವಿನ ನಿರೀಕ್ಷೆಯಲ್ಲಿ ಚೆನ್ನೈ ಸೂಪರ್ ಕಿಂಗ್ಸ್.

**ಈಗ ಇಂದಿನ ಬಿಗ್‌ನ್ಯೂಸ್ ಏನಂತ ನೋಡೋಣ**

- ಸಿ.ಇ.ಸಿ. ವರದಿಯ ಬಗ್ಗೆ ಯಡಿಯೂರಪ್ಪನವರ ಸಿಟ್ಟು.
- ವರದಿಯಲ್ಲಿ ನನನ್ನು ಇಕ್ಕಟ್ಟಿಗೆ ಸಿಲುಕಿಸುವ ಕುತಂತ್ರ ಅಡಗಿದೆ.
- ಇತರ ಮಾಜಿ ಮುಖ್ಯಮಂತ್ರಿಗಳನ್ನು ರಕ್ಷಿಸುವ ಕುತಂತ್ರ ಅಡಗಿದೆ.
- ಮತ್ತೆ ಹೊಸದಾಗಿ ವರದಿ ಸಲ್ಲಿಸಲು ಬಿಗಿಪಟ್ಟು.

ಹಾಗೆಯೇ

(ಟಿ.ವಿ.ಯ ಪರದೆಯ ಮೇಲೆ ದೊಡ್ಡ – ದೊಡ್ಡ ಅಕ್ಷರಗಳಲ್ಲಿ ಈ ಸಂಬಂಧ ಪಟ್ಟ ವಿಷಯ ಸಂಕ್ಷಿಪ್ತವಾಗಿ ಪ್ರಕಟವಾಗುತ್ತಲೇ ಇರುತ್ತದೆ.)

*ನಿರೂಪಕ:*

**ವಾರ್ತೆಯ ಸಂಕ್ಷಿಪ್ತ:**

ಕೇಂದ್ರ ಉನ್ನತಾಧಿಕಾರ ಸಮಿತಿಗೆ (ಸಿಇಸಿ) ಸಲ್ಲಿಸಿರುವದೊಂದಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ನೀಡಿರುವ ಪ್ರತಿಕ್ರಿಯೆ ಬಿ.ಜೆ.ಪಿ. ಯ ಎರಡು ಬಣಗಳನ್ನು ಮತ್ತು ಸಂಘರ್ಷದ ದಾರಿಗೆ ಎಳೆದು ತಂದಿದೆ.

ಮಾಜಿ ಮುಖ್ಯಮಂತ್ರಿಗಳಾದ ಎಸ್.ಎಂ. ಕೃಷ್ಣ, ಧರ್ಮಸಿಂಗ್, ಹೆಚ್.ಡಿ.ಕೆ. ವಿರುದ್ಧದ ಆರೋಪಗಳ ಕುರಿತು ಸಿ.ಇ.ಸಿ.ಗೆ ರಾಜ್ಯ ಸರ್ಕಾರ ನೀಡಿರುವ ಉತ್ತರ ವಾಸ್ತವಾಂಶದಿಂದ ಕೂಡಿಲ್ಲ. ಬದಲಿಗೆ ತಮ್ಮನ್ನು ಬಲಿಪಶು ಮಾಡಿ ಅವರನ್ನು ರಕ್ಷಿಸುವ ಕುತಂತ್ರ ಅಡಗಿದೆ ಎಂದು ಯಡಿಯೂರಪ್ಪ ಕೆಂಡ ಕಾರಿದ್ದಾರೆ.

ಇಂದು ಬೆಳ್ಳಂ ಬೆಳಿಗ್ಗೆಯೇ ರಾಜ್ಯ, ರಾಜಕೀಯದ ನಗರ ಕ್ಷೇತ್ರದ ಶಾಸಕ ಎಂ. ಶ್ರೀನಿವಾಸ ಮತ್ತು ಪುತ್ರ ವೆಂಕಟೇಶಬಾಬು ಮನೆಯ ಮೇಲೆ ಲೋಕಾಯುಕ್ತ ಪೊಲೀಸ್ ದಾಳಿ ನಡೆಸಿದ್ದು, ಲೋಕಾಯುಕ್ತ ಪೊಲೀಸ್ ಶ್ರೀನಿವಾಸ ತಮ್ಮ, ಅವರ ಪತ್ನಿ ಹಾಗೂ ಪುತ್ರನ ಹೆಸರಿನಲ್ಲಿ ಇರುವ ಆಸ್ತಿ, ದಾಖಲೆ ಇತರ ಮಾಹಿತಿಗಳನ್ನು ಕಲೆ ಹಾಕುವ ಕೆಲಸದಲ್ಲಿ ತೊಡಗಿದ್ದಾರೆ.

ಶ್ರೀನಿವಾಸ ಹೆಸರಿನಲ್ಲಿ ಮತ್ತು ಅವರ ಪುತ್ರನ ಹೆಸರಿನಲ್ಲಿ ಅಪಾರ ಪ್ರಮಾಣದ ಆಸ್ತಿ ಇದೆ ಎಂದು ಲೋಕಾಯುಕ್ತ ನ್ಯಾಯಾಲಯದಲ್ಲಿ ದೂರು ದಾಖಲಾಗಿತ್ತು. ಈಗ ಲೋಕಾಯುಕ್ತ ಪೊಲೀಸರು ಧಿಡೀರನೆ ದಾಳಿ ನಡೆಸಿದ್ದು, ಎಲ್ಲಾ ಮಾಹಿತಿ ಕಲೆ ಹಾಕುತ್ತಿದ್ದಾರೆ.

♦ ಇದೀಗ ಸಣ್ಣ ಬ್ರೇಕ್, ಬ್ರೇಕ್‌ನ ನಂತರ ಮತ್ತೆ ಸುವರ್ಣ ನ್ಯೂಸ್ ಮುಂದುವರೆಯಲಿದೆ.

* * * * * * * * * * *

♦ ಬ್ರೇಕ್‌ನ ನಂತರ ಮತ್ತೆ ಸುವರ್ಣ ನ್ಯೂಸ್‌ಗೆ ಸ್ವಾಗತ.

ಪೆಟ್ರೋಲ್ ಬೆಲೆ ಏರಿಕೆ ಕುರಿತು ಕೇಂದ್ರ ಸರ್ಕಾರ ವಿರುದ್ಧ ಈಗ ದೇಶವ್ಯಾಪ್ತಿ ಪ್ರತಿಭಟನೆ ಹೋರಾಟ ಚಳುವಳಿಗಳು ನಡೆಯುತ್ತಿದ್ದು, ಸಾಮಾನ್ಯ ಜನರ ಆಕ್ರೋಶಕ್ಕೆ ಕೇಂದ್ರ ಸರ್ಕಾರ ಗುರಿಯಾಗಿದ್ದು ಈಗ ಕೇಂದ್ರದ ವಿರುದ್ಧ ವಿರೋಧ ಪಕ್ಷವಾದ ಬಿ.ಜೆ.ಪಿ.ಯ ಸುಮ್ಮನೆ ಕೂಂತಿಲ್ಲ. ಕೇಂದ್ರ ಸರ್ಕಾರವು ಜನರ ಜೀವನದ ಜೊತೆ ಚೆಲ್ಲಾಟ ಮಾಡುತ್ತಿದ್ದು, ಅದು ಜನ ವಿರೋಧಿ ಸರ್ಕಾರವಾಗಿದೆ. ಈ ಕೂಡಲೆ ಪೆಟ್ರೋಲ್ ಬೆಲೆಯನ್ನು ಪೂರ್ತಿಯಾಗಿ ಇಳಿಸದೆ ಹೋದಲ್ಲಿ ಮುಂದಿನ ದಿನದಲ್ಲಿ ಭಾರತ ಬಂದ್‌ಗೆ ಕರೆಕೊಡಬೇಕಾಗುತ್ತದೆ. ದೇಶವ್ಯಾಪ್ತಿ ಯು.ಪಿ.ಎ. ವಿರುದ್ಧ ಪ್ರತಿಭಟನೆ ಹೋರಾಟ ಹಮ್ಮಿಕೊಂಡು, ಬೆಲೆಯೇರಿಕೆ ವಿರುದ್ಧ ಬಿ.ಜೆ.ಪಿ. ದನಿ ಎತ್ತಲಿದೆ ಎಂದು ಪಕ್ಷದ ರಾಷ್ಟ್ರೀಯ ಅಧ್ಯಕ್ಷ ನಿತಿನ್ ಗಡ್ಕರಿ ದೆಹಲಿಯಲ್ಲಿ ಸುದ್ದಿಗೋಷ್ಠಿಯಲ್ಲಿ ಇಂದು ವಿಷಯ ತಿಳಿಸಿದರು. ಇದೇ ವೇಳೆ ಯು.ಪಿ.ಎ. ಮಿತ್ರ ಪಕ್ಷಗಳಾದ ಡಿ.ಎಂ.ಕೆ. ಮತ್ತು ತೃಣ ಮೂಲ ಕಾಂಗ್ರೆಸ್ ಪೆಟ್ರೋಲ್ ಬೆಲೆ ಏರಿಕೆಯನ್ನು ಖಂಡಿಸಿದ್ದು, ಯು.ಪಿ.ಎ. ಯಿಂದ ಹೊರ ಬರುವುದಾಗಿಯೂ ಎಚ್ಚರಿಸಿದ್ದು ಕಾಂಗ್ರೆಸ್‌ಗೆ ನುಂಗಲಾರದ ತುತ್ತಾಗಿ ಪರಿಣಾಮಿಸಲಿದೆ.

ನಾಳೆ ಐ.ಪಿ.ಎಲ್. ಕ್ರಿಕೆಟ್ ಲೀಗ್‌ನ ಮಹಾಕದನ ಅಂದರೆ ಪೈನಲ್ ಚನ್ನೈ ಮತ್ತು ಕಲ್ಕತ್ತಾ ನೈಟ್ ರೈಡಸ್ಸ್ ತಂಡವನ್ನು ನಡುವೆ ನಡೆಯಲಿದ್ದು ದೇಶದ ಎಲ್ಲಾ ಕ್ರಿಕೆಟ್ ಪ್ರೇಮಿಗಳ ಕೂತುಹಲದಿಂದ ಕಾಯುತ್ತಿದ್ದಾರೆ. ಸತತ ಮೂರನೇ ಬಾರಿಗೆ ಚಾಂಪಿಯನ್ ಆಗುವ ಕನಸು ಕಾಣತ್ತಿರುವ ಧೋಣಿ ಪಡೆ ಕಳೆದ ಎರಡು ಪಂದ್ಯಗಳಲ್ಲಿ ಅತ್ಯುತ್ತಮ ಪ್ರದರ್ಶನ ನೀಡಿದೆ ಹಾಗೆಯೇ ಗೌತಮ್ ಗಂಭೀರ್ ನಾಯಕರಾಗಿರುವ ಶಾರುಖ್ ಒಡೆತನದ ಕೋಲ್ಕತ್ತಾ ನೈಟ್ ರೈಡರ್ಸ್ ತಂಡ ಉತ್ತಮ ಫಾರ್ಮನಲ್ಲಿದ್ದು ನಾಳೆ ಕೋಟ್ಯಂತರ ಕ್ರಿಕೆಟ್ ಅಭಿಮಾನಿಗಳು ಪಂದ್ಯವು ಯಾರ ಪಾಲಾಗಲಿದೆ ಎಂಬ ಕ್ಷಣಕ್ಕಾಗಿ ಕಾಯುತ್ತಿದ್ದಾರೆ.

ಈಗ ಕೊನೆಯಲ್ಲಿ ಮತ್ತೊಮ್ಮೆ ಹೆಡ್‌ಲೈನ್ಸ್:

- ಮತ್ತೆ ಸರ್ಕಾರದ ವಿರುದ್ಧ ಯಡಿಯೂರಪ್ಪನಿಂದ ಸಿ.ಇ.ಸಿ. ಗೆ ಹೊಸದಾಗಿ ವರದಿ ಸಲ್ಲಿಸಲು ಬಿಗಿ ಪಟ್ಟು.
- ಶಾಸಕ ಎಂ. ಶ್ರೀನಿವಾಸ ಮನೆಯ ಮೇಲೆ ಲೋಕಾಯುಕ್ತ ದಾಳಿ, ಅಪಾರ ಪ್ರಮಾಣ ಹಣ, ಚಿನ್ನಾಭರಣ, ದಾಖಲೆ ವಶ.
- ಪೆಟ್ರೋಲ್ ಬೆಲೆ ಏರಿಸುವ ಕೇಂದ್ರದ ವಿರುದ್ಧ ಸಿಟ್ಟು ಎನ್.ಡಿ.ಎ. ಯಿಂದ ಭಾರತ್ ಬಂದ್‌ಗೆ ಕರೆ ಕೊಡುವ ಎಚ್ಚರಿಕೆ.
- ನಾಳೆ ಐ.ಪಿ.ಎಲ್ ಗೆ ಮಹಾಕದನ ಹ್ಯಾಟ್ರಿಕ್ ಪ್ರಶಸ್ತಿ ಗೆಲುವಿನ ನಿರೀಕ್ಷೆಯಲ್ಲಿ ಚೆನ್ನೈ ಸೂಪರ್ ಕಿಂಗ್ಸ್.

ಈಗ ಐ.ಪಿ.ಎಲ್ ಕ್ರಿಕೆಟ್‌ನ ವಿಶೇಷ ಕಾರ್ಯಕ್ರಮ "ಐ.ಪಿ.ಎಲ್ ಹಂಗಾಮ" ಪ್ರಸಾರವಾಗಲಿದೆ. ಕ್ಷಣ ಕ್ಷಣದ ಸುದ್ದಿಗಾಗಿ ನೋಡ್ತಾ ಇರಿ ಸುವರ್ಣ ನ್ಯೂಸ್ ೨೪x೭.

## ಸಮೂಹ ಮಾಧ್ಯಮಗಳ ಸುದ್ದಿಯ ತಲೆಬರಹಗಳು

- ಬೋಗಿಯಲ್ಲಿದ್ದ ೮ ಜನ ಸಜೀವ 'ದಹನ'
- ಫೈನಲ್‌ಗೆ 'ಎಂಟ್ರಿಕೊಟ್ಟ' ಚೆನ್ನೈ ಸೂಪರ್ 'ಕಿಂಗ್ಸ್'
- ಫೈನಲ್‌ಗೆ ಲಗ್ಗೆ ಇಟ್ಟ ದೋನಿ 'ಟೀಮ್'
- ಕಾಲಿಡಿಯೋದ 'ಸಂಸ್ಕೃತಿ' ಕಾಲೆಳೆಯೋದು 'ವಿಕೃತಿ',
- ರವಿ ವಿರುದ್ಧ 'ರೇಣುಕಾಸ್ತ್ರ'
- ಬಿ.ಎಸ್.ವೈ.ಗೆ 'ಡೈ' ಹೊಡೆದಿದ್ದ ಸಿ.ಟಿ. ರವಿ,
- ಹ್ಯಾಟ್ರಿಕ್ ಮಿಸ್ ಮಾಡ್ಕೊಂಡ ಕೂಲ್ 'ಕ್ಯಾಪ್ಟನ್'.
- ಸಖತ್ತಾಗಿತ್ತು ಶಾರುಖ್ 'ಸೆಲೆಬ್ರೇಷನ್'.
- 'ಪಲ್ಟಿ' ಹೊಡೆದು ಕಿಂಗ್ ಖಾನ್ ಹುಡುಗಾಟ
- 'ಪ್ರೀತಿಗಾಗಿ ಪ್ರೇಯಸಿಯನ್ನೇ ಕೊಂದ ತೇಜ ಟಿ.ವಿ. ಮೇಕಪ್ ಮ್ಯಾನ್'
- ನಾಯಕನೆಂಬ 'ಪೊಲೀಸ್' ಪುಂಡ.
- ನೇಮಕಾತಿ 'ಗೋಲ್ – ಮಾಲ್',
- ಜಗನ್ ಮೊಹನ್‌ರೆಡ್ಡಿ 'ಅರೆಸ್ಟ್' ಆಗ್ತಾರಾ ..................?
- ರೋಹಿತ್‌ಗೆ ಮೂತ್ರ ವಿಸರ್ಜನೆ 'ಆಪರೇಷನ್'
- ಎಂ.ಎಲ್.ಎ.ಗೆ 'ಲೋಕಾ' ಬಿಸಿ.
- 'ಯಡವಟ್' ಡಾಕ್ಟರ್
- ಸಿ.ಬಿ.ಐ 'ಚಕ್ರವ್ಯೂಹ'ದಲ್ಲಿ ವೈ.ಎಸ್.ಆರ್. ಪುತ್ರ.
- ಮಾಹಿತಿ ಕಾಯ್ದೆಯ 'ಅಕ್ರಮ' ಬಯಲು.
- ಕೊಲ್ಕತ್ತಾ 'ಕಮಾಲ್'

<u>ಟಿ.ವಿ. ೯ ೨೦೧೨</u>

- ೮೬ ರನ್‌ಗಳಿಂದ ಧೋನಿ 'ಬಾಯ್ಸ್'ಗೆ ಜಯ
- ಸತತ ೩ ಬಾರಿ ಚೆನ್ನೈ 'ಫೈನಲ್' ಪ್ರವೇಶ
- ವಕೀಲನ 'ಘನಂದಾರಿ' ಕೆಲ್ಸ ನೋಡ್ರಿ,

- ಕೇಂದ್ರದಾಗ ಸರೀಗಿ 'ಕಂಪ್ಯೂಟರ್' ಇಲ್ಲ.
- ಎಲ್ಲಿ ಬೇಕಲ್ಲಿ ಕಾಣಿಸ್ತಿವೆ ಚಿಂದಿ 'ಅರಿವೆ.'
- ಕಲುಷಿತಗೊಳ್ಳುತ್ತೈತೆ ಬಸವಣ್ಣನ 'ಐಕ್ಯ ಸ್ಥಳ'
- ಐತಿಹಾಸಿಕ ಕ್ಷೇತ್ರ ಉಳಿಸಿ ಅಂತಾರೆ ಮಂದಿ.
- ಆರೆಂಜ್ ಕ್ಯಾಪ್ ಸರದಾರ 'ಗೇಲ್'
- ಗೌಡ ಹೇ ಮೈದಾನ್ ಹೇ (ಡಿಕೆಸಿ ಯವರು ತೇಜಸ್ವಿನಿ ಕುರಿತು)
- 'ರನ್‌ವೇ'ಗೆ ನುಗ್ಗಿದ ಕಾಡು ಕೋಣ
- ಮದುವೆ ಮನೆಗೂ ತಟ್ಟಿದ ಬಂದ್ 'ಬಿಸಿ'
- 'ಅಪರೇಷನ್' ಅವಾಂತರ
- ಲೋಕಾಯುಕ್ತ 'ಶಾಕ್'
- 'ಡವ್' ರಾಣಿ ಕಂಬಿ ಹಿಂದೆ
- 'ನಸುಕಿನಲ್ಲಿ' ಬಂದ 'ಜವರಾಯ'
- ಈ 'ಸೀಮೆ'ಗಿಲ್ಲ ಎಣ್ಣೆ .........!
- ಆಂಧ್ರಾದ್ಯಂತ ಸೆಕ್ಯುರಿಟ್ 'ಫುಲ್ ಟೈಟ್'
- ಆಂಧ್ರದಲ್ಲಿ 'ಅಲ್ಲೋಲ ಕಲ್ಲೋಲ'
- ಯಾರು 'ತೀನ್' 'ದಿನ' ಕಾ ಡಿಜಿಪಿ
- ಎಂಗೇಜ್‌ಮೆಂಟ್ ಆಗಿ 'ಎಸ್ಕೇಪ್'

<u>ಸುವರ್ಣ ೨೪ x ೭</u>

- ಐ.ಪಿ.ಎಲ್ ಫೈನಲ್‌ಗೆ ಚೆನ್ನೈ ಎಂಟ್ರಿ
- ಗೆದ್ದ ಚೆನ್ನೈ ಫೈನಲ್‌ಗೆ,
- ಅನಿತಕ್ಕ ರೋಡ್ ಹಿಂಗ್ಯಾಕ್, ..................... ?
- ಬಾಚಣಿಗೆ ಥರ ಕೈ ಬಳಕೆ.
- ಇತಿಹಾಸ ಪರೀಕ್ಷೆಯಲ್ಲಿ ಗೈರು ಅಂತಾ ಫೇಲ್
- ಪಿ.ಯು. ಬೋರ್ಡ್ ಅವಾಂತರ
- ವಿದ್ಯಾರ್ಥಿ ಭವಿಷ್ಯಕ್ಕೆ ಕುತ್ತು

- ವೀಣಾ ಸಖತ್ ಹಾಟ್ ಮಗಾ
- ಜನರಿಗೆ ಸರ್ಕಾರದ "ತಾತ್ಕಾಲ್ ಬಸ್" ವ್ಯವಸ್ಥೆ.
- ನೀರಿನ 'ಅಕ್ರಮ' ಬಳಕೆ
- ನಾಗವಾರ 'ಲೇಔಟ್' ರದ್ದು
- ನಾಗರಾಜ 'ಆಲಿಯಾಸ್' ಬಾಬಾ
- ಮೂರು ಎಕರೆ ಜಮೀನು ಪ್ರಭಾವಿಗಳ 'ಪಾಲು'
- ಅಧಿಕಾರಿಗಳಿಗೆ ಕೇಳುತ್ತಿಲ್ಲ ಈ ಬಡ ರೈತನ 'ಗೋಳು'

ಜನಶ್ರೀ ನ್ಯೂಸ್

- ಈ ದೇಶದ ಕತೆ ಇಷ್ಟೆ ಕಣಮ್ಮೋ ............... ?
- ರೆಡ್ ಹ್ಯಾಂಡ್ ಆಗಿ ಸಿಕ್ಕಿ ಬಿದ್ದ ಅಧಿಕಾರಿಗಳು
- ವಿಕಾಸ ಸೌಧದಲ್ಲಿ ಕಡತದ ಚೋರರು
- ಮೈಸೂರು ಬ್ಯಾಂಕ್ ಸರ್ಕಲ್‌ನಲ್ಲಿ ಪ್ರತಿಭಟನೆ
- ನಾಯಕನೆಂಬ ಪೊಲೀಸ್ ಪುಂಡ !
- ಭೀಮಾ ತೀರದಲ್ಲಿ ಮತ್ತೆ ರಿವೆಂಜ್ ಕಿಲ್ಲಿಂಗ್.
- ಗಣಿ ದಣಿ ಜನಾರ್ಧನ ರೆಡ್ಡಿಗೆ ಇಂದು 'ಅಗ್ನಿ ಪರೀಕ್ಷೆ'
- ಬಳ್ಳಾರಿಯ್ಲಲಿ ಬೆಳ್ಳಂ ಬೆಳ್ಳಿಗ್ಗೆ ಹರಿದ ನೆತ್ತರು
- ರೆಡ್ಡಿಗೆ ಬೇಲಾ ............ ಜೈಲಾ .............. ?
- ವೆಜ್ 'ಟ್ರಬಲ್'
- ಹೆಂಗೆಳೆಯರ ಹೃದಯ ಗೆದ್ದ ರಣಧೀರ
- ವಿಭಿನ್ನ ಮ್ಯಾನರಿಜಂನಿಂದ ಮನಗೆದ್ದ ಸರದಾರ

ಸಮಯ ೨೪ x ೭

## ಸುದ್ದಿ ವಾಹಿನಿಗಳಲ್ಲಿ ಬಳಕೆಯಾದ ಪದ ಮತ್ತು ಬಳಕೆಯಲ್ಲಿರುವ ಅರ್ಥ

| | | |
|---|---|---|
| ಭಾಗಿ | – | ಹಾಜರಾತಿ, ಭಾಗವಹಿಸುವುದು |
| ಬಂದ್ | – | ಮುಚ್ಚುವುದು, ಅಂಗಡಿ ಬಾಗಿಲು ಹಾಕುವುದು. |
| ಹಂಗಾಮಿ | – | ತಾತ್ಕಾಲಿಕವಾಗಿ ಜವಾದ್ದಾರಿ ವಹಿಸಿಕೊಳ್ಳುವುದು. |
| ರನ್‌ವೇ | – | ವಿಮಾನ ಹಾರುವ ದಾರಿ |
| ಅಕ್ರಮ | – | ಕ್ರಮವಲ್ಲದ, ತಪ್ಪುದಾರಿ |
| ಅಖಾಡ | – | ವ್ಯಾಯಾಮ ಶಾಲೆ, ಗರಡಿಮನೆ |
| ಅಟ್ಟಹಾಸ | – | ಜಂಭ, ದೊಡ್ಡ ನಗು, ಬಡಿವಾರದ ನಗು |
| ಅನಾಮಿಕ | – | ವ್ಯಾಯಾಮ ಶಾಲೆ, ಗರಡಿ ಮನೆ |
| ಅನ್ಯಾಯ | – | ನ್ಯಾಯರಹಿತವಾದದು, ನೀತಿಯಲ್ಲದ್ದು |
| ಅಪಘಾತ | – | ಹಿಂಸೆ, ದುರ್ಘಟನೆ, ಡಿಕ್ಕಿ |
| ಅಪಹರಣ | – | ಕಸಿದುಕೊಳ್ಳುವಿಕೆ, ಅಪಹರಿಸುವುದು |
| ಅಪಾಯ | – | ಹಾನಿ, ಕೇಡು, ತೊಂದರೆ |
| ಅಬ್ಬೆಪಾರಿ | – | ವ್ಯರ್ಥವಾಗಿ ತಿರುಗಾಡುವವ, ಯಾರುಗತಿ ಇಲ್ಲದವ |
| ಅಮುಲದಾರ | – | ಮಧ್ಯಪಾನವನ್ನು ಮಾಡಿದವ |
| ಅರೆಸ್ಟ್ | – | ಬಂಧಿಸುವುದು, ಬಂಧನ |
| ಅವ್ಯವಹಾರ | – | ಶ್ರಮವಿಲ್ಲದ ವ್ಯಾಪಾರ, ಸರಿಯಲ್ಲದ ರೀತಿಯ ವ್ಯವಹಾರ |
| ಅರೆಸ್ಟ್ ವಾರೆಂಟ್ | – | ಬಂಧನದ ಪತ್ರ |
| ಅಸಲಿ | – | ನಕಲಿಯಲ್ಲದ, ನಿಜವಾದದ್ದು |
| ಅಸಲು | – | ವಾಸ್ತವ ನಿಜವಾದ |
| ಅಕ್ರಮಣ | – | ದಾಳಿ, ಅಕ್ರಮವಾಗಿ ಏರಿ ಹೋಗುವಿಕೆ, ಮುತ್ತಿಗೆ |
| ಅಕ್ರಂದನ | – | ಅತೀ ದುಃಖ ತುಂಬಿಕೆ, ಗಟ್ಟಿಯಾಗಿ ಅಳುವಿಕೆ, ಜೋರಾಗಿ ಅಳುವುದು. |

| | | |
|---|---|---|
| ಆಕ್ರೋಶ | – | ಉಗ್ರವಾದ ಕೋಪ, ಬೈಯುವಿಕೆ |
| ಆ್ಯಕ್ಟ್ | – | ಕಾಯಿದೆ, ಕಾನೂನು |
| ಆಕ್ಸಿಡೆಂಟ್ | – | ಅಪಘಾತ, ದುರ್ಘಟನೆ |
| ಆತಂಕ | – | ಅನುಮಾನ, ಭಯ |
| ಅಪಾದನೆ | – | ಆರೋಪ ಹೊರಿಸುವುದು, ಆರೋಪ ಮಾಡುವುದು |
| ಆಶ್ಚರ್ಯ | – | ಆಚ್ಚರಿಯಾದದ್ದು, ವಿಸ್ಮಯವಾದದ್ದು, ಅದ್ಭುತ |
| ಆಹುತಿ | – | ಬಲಿ, ಬಲಿಯಾಗುವುದು, ಕುತ್ತು |
| ಉಗ್ರಗಾಮಿ | – | ಬಂಡಾಯ ಎದ್ದವನು. |
| ಉಪಟಳ | – | ಕಿರುಕುಳ, ತೊಂದರೆ, ಪೀಡೆ |
| ಎತ್ತಂಗಡಿ | – | ವರ್ಗಾವಣೆ ಮಾಡುವುದು, ಸ್ಥಳಾಂತರಿಸುವುದು |
| ಎರ್ರಾಬಿರ್ರಿ | – | ಕ್ರಮವಲ್ಲದ ರೀತಿಯಲ್ಲಿ, ಯದ್ವಾ ತದ್ವಾ |
| ಎಸ್ಕೇಪ್ | – | ಪರಾರಿಯಾಗುವುದು, ಓಡಿ ಹೋಗುವುದು |
| ಏರುಪೇರು | – | ಮೇಲೆ ಕೆಳಗಾಗು, ತಲೆ ಕೆಳಗಾಗುವುದು, ಹೆಚ್ಚು ಕಡಿಮೆ |
| ಐಷಾರಾಮಿ | – | ಸುಖದಾದ, ಭೋಗ ವಿಲಾಸ |
| ಐಟಲಗಾ | – | ಜಿಗಿಯುವುದು, ನಗೆಯುವುದು, ಕುಣಿಯುವುದು |
| ಓನ್‌ಬಿಜಿನೆಸ್ | – | ಸ್ವಂತ ವ್ಯವಹಾರ |
| ಔಟ್ ಗೋಯಿಂಗ್ | – | ಹೊರಗಡೆ ಹೋಗುವಂಥದ್ದು |
| ಕಚ್ಚಾಟ | – | ಜಗಳ, ಕಲಹ, ಬೈದಾಡುವುದು, ಕಿತ್ತಾಡುವುದು |
| ಕಟುಕ | – | ದಯೇ ಇಲ್ಲದವರು, ಹಿಂಸೆ ನೀಡುವವನು |
| ಕದನ | – | ಹೊಡೆದಾಟ, ಹೋರಾಟ |
| ಕರಾಳ ದಿನ | – | ಭಯಂಕರವಾದ ದಿನ, ಕೆಟ್ಟ ದಿನ |
| ಕರಾಳ ರಾತ್ರಿ | – | ಕೆಟ್ಟದಾದ ಇರುಳು |
| ಕಾನೂನು | – | ನ್ಯಾಯಬದ್ಧವಾದ, ನಿಯಮಾವಳಿ |
| ಕಾಮದಾಟ | – | ಲೈಂಗಿಕ ಕ್ರೀಡೆ |
| ಕಿರುಕುಳ | – | ತೊಂದರೆ ಕೊಡುವುದು, ಹಿಂಸೆ ಮಾಡುವುದು |

| | | |
|---|---|---|
| ಕ್ರಿಮಿನಲ್ | – | ಅಪರಾಧಿ |
| ಕೇಸ್ | – | ಪ್ರಕರಣ |
| ಕೋರ್ಟ್ | – | ನ್ಯಾಯಾಲಯ, ನ್ಯಾಯ ಸ್ಥಾನ |
| ಖಟ್ಲೆ | – | ಜಗಳ, ಪ್ರಕರಣ, ದಾವೆ, ನ್ಯಾಯ |
| ಗರಡಿ ಮನೆ | – | ಕುಸ್ತಿ ಕಲಿಯುವ ಮನೆ, ಅಂಗ ಸಾಧನೆ |
| ಗರಂ ಗರಂ | – | ಬಿಸಿ ಬಿಸಿ, ತಾಜಾ |
| ಗಾಳ | – | ಗಂಟಲಿಗೆ ಹಾಕುವ ಸಾಧನ, ಮೀನು ಹಿಡಿಯುವ ಸಾಧನ |
| ಗಾಂಚಾಲಿ | – | ಧಿಮಾಕು, ಕೊಬ್ಬಿನ |
| ಗೂಂಡಾ | – | ದಾದಾ, ರೌಡಿ, ಸಮಾಜಘಾತುಕ |
| ಘಟನೆ | – | ಆಕಸ್ಮಿಕವಾದ ಸಂಗತಿ |
| ಘಟಾನುಘಟಿ | – | ಅತೀ ಸಮರ್ಥವಾದ, ಬಹಳ ಗಟ್ಟಿಗ |
| ಚಟ | – | ಹಾವ್ಯಾಸ, ರೂಢಿ, ಅಭ್ಯಾಸ, ಕೆಟ್ಟ ಅಭ್ಯಾಸ |
| ರಾಜಕೀಯ ಚಮಚಾಗಳು | – | ಸೇವಕರು, ಗುಲಾಮರು |
| ಚಳ್ಳೆ ಹಣ್ಣು ತಿನ್ನಿಸು | – | ಮೋಸ ಮಾಡುವುದು |
| ಛಲ | – | ಹಠ, ಹಟ |
| ಕನಸುಗಾರ | – | ಕನಸು ಕಾಣವುದು |
| ಛಾಲೆಂಜ್ | – | ಹಠ, ಪಣ ತೊಡುವುದು |
| ಛಲಗಾರ | – | ಹಠವಾದಿ, ಪರಾಕ್ರಮ |
| ಜಾಮೀನು | – | ಜವಾಬ್ದಾರಿ ಒತ್ತುಕೊಳ್ಳುವುದು, ಹೊಣೆ, ಬತ್ತೆ |
| ಜೀವಾವಧಿ ಶಿಕ್ಷೆ | – | ಜೀವನಾವಧಿ ಸೆರೆಯಾಗಿ, ಜೀವನ ಪೂರ್ವತರ್ಾ ಸೆರೆಮನೆಯಲ್ಲಿ ಇರುವುದು |
| ಜೈಲು ಶಿಕ್ಷೆ | – | ಸೆರೆಮನೆ ವಾಸ |
| ಡ್ರಗ್ಸ್ | – | ಮಾದಕ ವಸ್ತು, ಔಷಧ |
| ಡ್ರಗ್ಸ್ ಮಾಫಿಯಾ | – | ಮಾದಕ ವಸ್ತು ವ್ಯವಹಾರ |
| ಡಾನ್‌ಗಳು | – | ನಾಯಕರುಗಳು, ಲೀಡರುಗಳು, ಹೊಡೆದಾಡುವ ಗುಂಪುಗಳ ನಾಯಕರು |

ಡೀಲ್ – ವ್ಯವಹಾರ

ಡೈರಿ – ದಿನಚರಿ, ಪ್ರತಿನಿತ್ಯ ದಿನಗಳು, ಮಾಡುವ ಕೆಲಸವನ್ನು ಬರೆದಿಡುವ ಪುಸ್ತಕ

ಡೈಲಿ – ದಿನಾಲು, ಪ್ರತಿನಿತ್ಯ, ಪ್ರತಿ ದಿನ

ತಗಾದೆ – ಜಗಳ ಕಾಯುವುದು

ತಲಾಷ್ – ಹುಡುಕಾಟ

ತರಾತುರಿ – ಬೇಗ ಬೇಗನೆ, ಅವಸರ, ಬೇಗನೆ

ದರ್ಪ – ಅಧಿಕಾರ ಚಲಾಯಿಸುವುದು, ಅಬ್ಬರ ಮಾತು, ಅಧಿಕಾರ ಮಾತು

ದಂಡ – ಶುಲ್ಕ, ತಪ್ಪಿಗೆ ಕಟ್ಟುವ ಶುಲ್ಕ

ದಾಂಧಲೆ – ಗಲಾಟೆ ಎಬ್ಬಿಸುವುದು

ದಾದಾಗಿರಿ – ಗೂಂಡಾಗಿರಿ

ದುರಂತ – ಅತೀ ದುಃಖಕರವಾದ ಸಂಗತಿ, ಪರಿಣಾಮ ಕೆಟ್ಟದಾಗುವುದು

ದುರ್ಮರಣ – ವಿಚಿತ್ರವಾದ ಸಾವು, ಕೆಟ್ಟ ಸಾವು

ದುಶ್ಮಾನ್ – ಶತ್ರು, ವೈರಿ, ಕಡು ವೈರಿ

ದೇಶದ್ರೋಹ – ದೇಶಕ್ಕೆ ಕೆಟ್ಟದನ್ನು ಬಗೆಯುವುದು

ದೇಶದ್ರೋಹಿ – ದೇಶಕ್ಕೆ ಕೆಟ್ಟದನ್ನು ಬಗೆಯುವವನು

ದೌರ್ಜನ್ಯ – ದುಷ್ಟತನ,

ದ್ವೇಷಿ – ಹೊಟ್ಟೆಕಿಚ್ಚು, ಹಗೆ, ವೈರಿ

ಧಗೆ – ಬೆಂಕಿ, ಉರಿ

ಧಮಕಿ – ಎಚ್ಚರಿಕೆ ನೀಡುವುದು, ಬೆದರಿಸುವುದು.

ನಕ್ಸಲೈಟ್ – ಉಗ್ರಗಾಮಿತನ, ಉಗ್ರಗಾಮಿ

ನರಕ – ಬಹಳ ಹೊಲಸಾದ, ಹೀನಾಯವಾದ

ನೆಟ್‌ವರ್ಕ್ – ಸಂಪರ್ಕಜಾಲ, ವ್ಯವಸ್ಥಿತ ಗುಂಪು

ನ್ಯಾಯಪೀಠ – ತೀರ್ಪು ನೀಡುವ ಸ್ಥಾನ, ಕೋರ್ಟ್

ಪರದಾಟ – ತಿರುಗಾಟ, ಅಲೆದಾಡುವುದು, ತಿರುಗಾಡುವುದು

ಪರದಾಡು – ಅಲೆದಾಡುವುದು, ತಿರುಗಾಡುವುದು

ಪಾಲಿಟಿಕ್ಸ್ – ರಾಜಕಾರಣ, ರಾಜಕೀಯ

ಪುಂಡಾಡಿ – ಉಡಾಳ, ತಂಟೆಕೋರ, ತುಂಟ, ಲೂಟಿಗಾರ

ಪುಂಡ – ಉಡಾಳ, ತಂಟೆಕೋರ, ತುಂಟ, ಲೂಟಿಗಾರ

ಪ್ರೀತಿ – ಮೋಹ, ವ್ಯಾಮೋಹ

ಬಲಿ – ಆಹುತಿ

ಬಲೆ – ಮೀನು ಮುಂತಾದ ಪ್ರಾಣಿಗಳನ್ನು ಸೆರೆ ಹಿಡಿಯುವ ಸಾಧನ, ಮೋಸ ಮಾಡಿ ವಶ ಪಡಿಸಿಕೊಳ್ಳುವುದು

ಬಂಧನ – ಸೆರೆ

ಬೇಜಾನ್ – ಸಾಕಷ್ಟು, ಬಹಳವಾದ

ಬೇಟೆ – ಬಲಿಯಾಗುವಂಥದ್ದು, ಆಹುತಿಯಾಗುವಂಥದ್ದು, ಶಿಕಾರಿ

ಬೇಹುಗಾರ – ಗುಪ್ತ ಮಾಹಿತಿದಾರ, ಪತ್ತೇದಾರ

ಬೇಹುಗಾರಿಕೆ – ಗೂಂಢಾಚಾರಿಕೆ, ಗುಪ್ತಚಾರಿಕೆ

ಬ್ರೋಕರ್ – ದಲ್ಲಾಳಿ, ಮಧ್ಯವರ್ತಿ

ಭಯೋತ್ಪಾದನೆ – ಹಿಂಸೆ ನೀಡುವುದು, ಭಯವನ್ನುಂಟು ಮಾಡುವುದು

ಭೂ ಮಾಫಿಯಾ – ಭೂ ಕಬಳಿಕೆಯ ವ್ಯವಹಾರದಲ್ಲಿರುವವರು

ಭಷ್ಟತೆ – ಕೆಳಗೆ ಬಿದ್ದ, ಕೆಟ್ಟ ದೂಷಿತ ಆಚಾರವುಳ್ಳ

ಭ್ರಷ್ಟಾಚಾರ – ಕೆಟ್ಟ ಆಚಾರ, ದುಷ್ಟ ಆಚಾರ, ಲಂಚ ಪಡೆಯುವುದು

ಭೀಭತ್ಸ – ಭೀಕರವಾದ, ಭಯವನ್ನುಂಟು ಮಾಡುವ

ಮತ್ಸರ – ಹೊಟ್ಟೆ ಕಿಚ್ಚು

ಮಾಫಿಯಾ – ದಂಧೆ, ವ್ಯಾಪಾರ, ವ್ಯವಹಾರ

ಯದ್ವಾ ತದ್ವಾ – ಸಿಕ್ಕಾಪಟ್ಟೆ, ಕ್ರಮರಹಿತವಾಗಿ

ಯರ್ರಾಬಿರ್ರಿ – ಸಿಕ್ಕಾಪಟ್ಟೆ, ಕ್ರಮರಹಿತವಾಗಿ

ರಂಪಾಟ – ಕೋಲಾಹಲ, ಗಲಾಟೆ

ರಾಜಿ – ಸಂಧಾನ, ಒಪ್ಪಂದ

ರೇಡು – ದಾಳಿ

| | | |
|---|---|---|
| ರೈಡ್ | – | ದಾಳಿ |
| ರೋಲ್ ಕಾಲ್ | – | ಹಣ ವಸೂಲಿ ಮಾಡುವುದು, ಬೆದರಿಸಿ ಹಣ ಕಿತ್ತುಕೊಳ್ಳುವುದು |
| ಲಂಚ | – | ಅಕ್ರಮವಾಗಿ ಸ್ವೀಕರಿಸಿದ ಕಪ್ಪುಹಣ |
| ಲಂಚಕೋರ | – | ಅಕ್ರಮವಾಗಿ ಹಣವನ್ನು ಸ್ವೀಕರಿಸಿದವನು |
| ಲಂಚ ಗುಳಿತನ | – | ಅಕ್ರಮವಾಗಿ ಹಣವನ್ನು ಸ್ವೀಕರಿಸುವಂಥದ್ದು |
| ಲವ್‌ಕೇಸ್ | – | ಪ್ರೇಮ ಪ್ರಕರಣ |
| ಲಾಯರ್ | – | ವಕೀಲ, ನ್ಯಾಯವಾದಿ |
| ವಂಚನೆ | – | ಮೋಸ, ಅನ್ಯಾಯ |
| ಸಂಧಾನ | – | ಸೇರುವಿಕೆ, ಒಪ್ಪಂದ ಸೇರಿಸುವಿಕೆ, ಒಟ್ಟು ಗೂಡಿಸುವಿಕೆ |
| ಸೆಕೆಂಡ್ಸ್ ದಂಧೆ | – | ಕಾಳ ಸಂತೆ ವ್ಯಾಪಾರ, ನಕಲು ವಸ್ತುಗಳ ಮಾರಾಟ ಮಾಡುವ ಸ್ಥಳ |
| ಸೇಡು | – | ಹಗೆ, ಮುಯ್ಯಿ |
| ಛಲ | – | ಹಟ, ಹಠ |

ಸಿಇಸಿ (Central Enquiry Committee) ಕೇಂದ್ರ ತನಿಖಾ ಸಮಿತಿ

ಎನ್‌ಡಿಎ (Natinal Democeractic Allience) ನ್ಯಾಷನಲ್ ಡೆಮಾಕ್ರಟಿಕ್ ಅಲಯನ್ಸ್

ಐಪಿಎಲ್ (Indian Premium Leuge) ಇಂಡಿಯನ್ ಪ್ರೀಮಿಯರ್ ಲೀಗ್

ಬಿಜೆಪಿ (Bharatiya Jantha Party) ಭಾರತೀಯ ಜನತಾ ಪಕ್ಷ

| | | |
|---|---|---|
| ನೈಟ್ | – | ರಾತ್ರಿ |
| ಹೆಡ್‌ಲೈನ್ಸ್ | – | ಮುಖ್ಯಾಂಶಗಳು |
| ಹ್ಯಾಟ್ರಿಕ್ | – | ಸತತವಾಗಿ ಮೂರು ಬಾರಿ |
| ಬಿಗ್‌ನ್ಯೂಸ್ | – | ಮಹಾಸುದ್ದಿ |
| ಮಾಜಿ | – | ಹಿಂದಿನ, ಆಗಿ ಹೋಗಿರುವ ನಿವೃತ್ತಿ |
| ಕುತಂತ್ರ | – | ದುರಾಲೋಚನೆ, ಕೆಟ್ಟ ಯೋಚನೆ |
| ಬಿಗಿಪಟ್ಟಿ | – | ಗಟ್ಟಿಯಾಗಿ ಹಿಡಿಯುವುದು |
| ಬಲಿಪಶು | – | ಬೇರೆಯವರರಿಂದ ಹಾಳುಗೆಡುವುದು |

ಕೆಂಡಕಾರು – ಅತಿಯಾದ ಸಿಟ್ಟಾಗುವುದು

ಬೆಳ್ಳಂ ಬೆಳಿಗ್ಗೆ – ಸೂರ್ಯ ಹುಟ್ಟುತ್ತಿದ್ದಂತೆಯೇ

ಕ್ಷೇತ್ರ – ಸ್ಥಳ ಚೌಕಟ್ಟು ಎಲ್ಲೆಯನ್ನು ಗುರುತಿಸುವ ಸ್ಥಳ

ಲೋಕಾಯುಕ್ತ – ಭ್ರಷ್ಟರನ್ನು ಶಿಕ್ಷಿಸುವ ಮತ್ತು ಅವರ ವಿರುದ್ಧ ವಿಚಾರಣೆ ನಡೆಸುವ ನ್ಯಾಯಾಲಯ

ಧಿಡೀರನೆ – ತಟ್ಟನೆ, ಒಮ್ಮೆಲೆ

ಬ್ರೇಕ್ – ಬಿರುಕು, ವಿರಾಮ

ದೇಶವ್ಯಾಪ್ತಿ – ದೇಶದ ತುಂಬಾ, ದೇಶದ ಉದ್ದಗಲ

ಚೆಲ್ಲಾಟ – ತುಂಟಾಟ

ಜನ ವಿರೋಧಿ – ಜನರಿಗೆ ವಿರುದ್ಧವಾದ

ಮಿತ್ರ ಪಕ್ಷ – ತನ್ನನ್ನು ಬೆಂಬಲಿಸುವ ಸಹ ಪಕ್ಷಗಳು

ಕ್ರಿಕೆಟ್ ಲೀಗ್ – ಕ್ರಿಕೆಟ್ ಮಂಡಳಿ

ಉತ್ತಮ ಫಾರ್ಮ – (ಕ್ರಿಕೆಟ್ ಭಾಷೆಯಲ್ಲಿ) ಉತ್ತಮ ಆಟ ಪ್ರದರ್ಶನ

ಚಾನಲ್ – ವಾಹಿನಿ

ಕ್ಯಾಮರಮ್ಯಾನ್ – ಛಾಯಾ ಗ್ರಾಹಕ

ಕೊಲಿಗ್ – ಸಹಪಾಠಿ

ಸ್ಟುಡಿಯೋ – ಚಿತ್ರೀಕರಣ ಘಟಕ

ಪ್ರತಿನಿಧಿ – ವಿಷಯಗಳನ್ನು ಮುಟ್ಟಿಸುವ ವ್ಯಕ್ತಿ

ನೇರ ಸಂಪರ್ಕ – ನೇರ ಸಂವಹನ (ನೇರವಾಗಿ ವ್ಯಕ್ತಿಯ ಜೊತೆ ಮಾತು–ಕತೆ ನಡೆಸುವುದು)

ರಾಜ್ಯಪಾಲ – ರಾಜ್ಯದ ಪ್ರಥಮ ಪ್ರಜೆ (ಕಾರ್ಯಾಂಗ, ಶಾಸಕಾಂಗ, ವಿಧಾನ ಸಭೆಯ ಮುಖ್ಯಸ್ಥರು.

ಸ್ಪೀಕರ್ – ವಿಧಾನ ಸಭಾಧ್ಯಕ್ಷರು

ಕೌನ್ಸಿಲರ್ – ನಗರ ಪಾಲಿಕೆಯ ಸದಸ್ಯರು

ಮೇಯರ್ – ನಗರದ ಪ್ರಥಮ ಪ್ರಜೆ

ಶಾಸಕರು – ಚುನಾವಣೆಯಲ್ಲಿ ಜನರಿಂದ ನೇರವಾಗಿ ಆಯ್ಕೆ ಆದ ವಿಧಾನ ಸಭೆಯ ಸದಸ್ಯರು

ವಿಧಾನ ಸೌಧ – ರಾಜ್ಯದ ಆಡಳಿತ ನಡೆಸುವ ಕೇಂದ್ರ, ತಾಣ

ಪಾರ್ಟಿ – ಪಕ್ಷಗಳು

ಮಾಜಿ – ಹಿಂದಿನ

ಪಬ್ಲಿಕ್ – ನಾಗರೀಕರು, ಪ್ರಜೆಗಳು

ಪ್ರತಿಪಕ್ಷ – ವಿರೋಧ ಪಕ್ಷ

ಒಡಕು – ಬಿರುಕು, ಛಿದ್ರವಾಗು, ಇಬ್ಭಾಗವಾಗು

ಸಿ.ಎಂ. – ಮುಖ್ಯ ಮಂತ್ರಿ

ರಾಜೀನಾಮೆ – ತಮ್ಮ ಸ್ಥಾನವನ್ನು ತೊರೆಯುವುದು
ಗಿಮಿಕ್ – ಒಂದು ರೀತಿಯಲ್ಲಿ ಬೆದರಿಸಲು ಸಾಚಾ ಎಂಬಂತೆ ತೋರಿಸಿ ಕೊಳ್ಳುವ ಕುತಂತ್ರಗಳು
ವಜಾ – ಕಿತ್ತು ಹಾಕುವುದು, ತೆಗೆದು ಹಾಕುವುದು
ಬಿಗಿಬಂದೋಬಸ್ತ್ – ಪೊಲಿಸರು ಅನಾಹುತ ನಡೆಯದಂತೆ ತಡೆಯುವ ಬಿಗಿ ನಿಲುವು ಅಥವಾ ರಕ್ಷಣಾ ಕಾರ್ಯ
ನೆಟ್ಟಗಿಲ್ಲ – ಸರಿಯಾಗಿಲ್ಲ
ಯಡವಟ್ – ತೊಂದರೆ
ಲೇಬರ್ – ದಿನಗೂಲಿ ನೌಕರರು
ಪ್ರಾಂತ್ಯ – ಪ್ರದೇಶ, ಸ್ಥಳ
ಲಾಕ್ – ಮುಚ್ಚುವುದು
ಕಿರಿಕ್ – ತೊಂದರೆ ಕೊಡುವುದು
ಇಳಿಸಿ – ಕಡಿಮೆ ಮಾಡಿ
ಎಸ್ಕೇಪ್ – ಪರಾರಿ, ಓಡಿ ಹೋಗುವುದು, ನಾಪತ್ತೇ
ಫಿಕ್ಸ್ – ನಿಗದಿ, ನಿಗದಿಯಾಗಿತ್ತು
ಎಂಗೇಜ್‌ಮೆಂಟ್ – ನಿಶ್ಚಿತಾರ್ಥ, ಮದುವೆಗೆ ಮುನ್ನ ನಡೆಯುವ ಕಾರ್ಯ
ಶೇಂಗಾ ಎಣ್ಣೆ – ಕಡಲೆ ಬೀಜದಿಂದ ತೆಗೆಯುವ ಎಣ್ಣೆ
ಸರ್ಕಲ್ – ವೃತ್ತ
ನೆತ್ತರು – ರಕ್ತ
ತಲಾಷ್ – ಹುಡುಕಾಟ
ವೆಜ್ ಟ್ರಬಲ್ – ಸಸ್ಯಹಾರಿ, ತೊಂದರೆ
ಲೇಔಟ್ – ಬಡಾವಣೆ
ರದ್ದು – ವಜಾಗೊಳಿಸುವುದು.

# ಪರಾಮರ್ಶನ ಕೃತಿಗಳು

೧) ಪೂರ್ಣಿಮಾ ಟಿ.ಸಿ. ೨೦೦೩, ಆಧುನಿಕ ಸಂವಹನ ಮಾಧ್ಯಮಗಳು ಮತ್ತು ಕನ್ನಡ ಅಭಿವೃದ್ಧಿ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨) ಡಿ.ವಿ. ಗುಂಡಪ್ಪ, ೨೦೦೧, ವೃತ್ತ ಪತ್ರಿಕೆ, ಕಾವ್ಯಾಲಯ ಪ್ರಕಾಶಕರು, ಜಯನಗರ, ಮೈಸೂರು.

೩) ಸಂಪಾದಕ ಕೆ.ವಿ. ನಾರಾಯಣ, ೨೦೦೭, ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ, ೧ 'ಭಾಷೆ' ಪ್ರಸಾರಾಂಗ, ವಿಶ್ವವಿದ್ಯಾಲಯ, ಹಂಪಿ.

೪) ಚಂದ್ರಶೇಖರ್ ಬಿ.ಎಸ್. ೨೦೦೩, ಸಂವಹನ ಮಾಧ್ಯಮಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫) ನಾರಾಯಣ ಕೆ.ವಿ. ೧೯೯೮, ದ್ವಿಭಾಷಿಕತೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬) ಕನ್ನಡ ಸಾಹಿತ್ಯ ಸಮೀಕ್ಷೆ, ೧೯೭೫. ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ. ಸಂ:ಜಿ.ಎಸ್. ಶಿವರುದ್ರಪ್ಪ. ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭) ಡಾ॥ ಸಾ.ಶಿ. ಮರುಳಯ್ಯ, ಡಾ॥ ರಾಜೇಶ್ವರಿ ಮಹೇಶ್ವರಯ್ಯ, ಡಾ॥ ಸಬಿಹಾ ಭೂಮಿಗೌಡ. ಭಾಷಾ ಬೆಳವಣಿಗೆ ೨೦೦೭, ಕನ್ನಡ ಸಾಹಿತ್ಯ ಪರಿಷತ್ತ್, ಪಂಪಮಹಾಕವಿರಸ್ತೆ, ಚಾಮರಾಜಪೇಟೆ, ಬೆಂಗಳೂರು.

೮) ಖಾದ್ರಿ ಎಸ್. ಅಚ್ಯುತನ್, ೨೦೦೮, ಕರ್ನಾಟಕ ಮಾಧ್ಯಮ ಅಕಾಡೆಮಿ, ಬೆಂಗಳೂರು.

೯) ಡಿ.ಎನ್. ಶಂಕರ ಭಟ್, ೨೦೦೬, ಸುವರ್ಣ ಸಾಹಿತ್ಯ ಗ್ರಂಥಮಾಲೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಕನ್ನಡ ಭವನ, ಬೆಂಗಳೂರು.

೧೦) ಬಸವರಾಜು ಕಲ್ಗುಡಿ. ೨೦೦೬. ಸಂ: ಸುವರ್ಣ ವಿಚಾರ ಸಾಹಿತ್ಯ. ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು.

೧೧) ಹಂಪ ನಾಗರಾಜಯ್ಯ. ೧೯೬೬. ದ್ರಾವಿಡ ಭಾಷಾ ವಿಜ್ಞಾನ. ಡಿ.ವಿ.ಕೆ ಮೂರ್ತಿ, ಪ್ರಕಾಶಕರು, ಮೈಸೂರು-೦೪.

೧೨) ವ್ಯಾವಹಾರಿಕ ಕನ್ನಡ, ಕನ್ನಡ ಭಾಷಾ ಪಠ್ಯ, ಬೆಂ.ವಿ.ವಿ, ಬಿ.ಬಿ.ಎಂ. ಪದವಿ ೨೦೦೮ ಸಂ: ಡಾ॥ ಬಸವರಾಜ ಕಲ್ಗುಡಿ.

೧೩) ಪಿ. ರಾಜೇಂದ್ರ ೨೦೧೦. ಮಾಧ್ಯಮ ಮಾರ್ಗದರ್ಶಿ, ದೇಸಿ ಪುಸ್ತಕ ಮಾಲೆ, ವಿಜಯನಗರ, ಬೆಂಗಳೂರು.

೧೪) ಎಂ.ಹೆಚ್. ಕೃಷ್ಣಯ್ಯ, ೧೯೯೩, ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಅಂಕಿತ ಪುಸ್ತಕ ಪ್ರಕಾಶಕರು ಮತ್ತು ಪುಸ್ತಕ ಮಾರಾಟಗಾರರು, ಬಸವನಗುಡಿ, ಬೆಂಗಳೂರು.

೧೫) ಶಂಕರಭಟ್ ಡಿ.ಎನ್., ೨೦೦೧, ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ಭಾಷಾ ಪ್ರಕಾಶನ, ಮೈಸೂರು.

೧೬) ಡಾ॥ ಸಂಗಮೇಶ ಸವದತ್ತಿ ಮಠ. ೧೯೭೬. ತೌಲನಿಕ ದ್ರಾವಿಡ ಭಾಷಾ ವಿಜ್ಞಾನ. ರೂಪದರ್ಶಿ ಪ್ರಕಾಶನ, ಧಾರವಾಡ.

೧೭) ನಾರಾಯಣ ಶಾಸ್ತ್ರಿ, ೧೯೯೦, ಪತ್ರಿಕೋದ್ಯಮ, ಸಮಾಜ ಪುಸ್ತಕಾಲಯ. ಶಿವಾಜಿ ಬೀದಿ, ಧಾರವಾಡ.

೧೮) ಎಲ್.ಎಸ್. ಶೇಷಗಿರಿ ರಾವ್, ೧೯೯೯, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ (ಪ್ರಕಾಶಕರು ಮತ್ತು ಪುಸ್ತಕ ಮಾರಾಟಗಾರರು) ಬಸವನಗುಡಿ, ಬೆಂಗಳೂರು-೦೪.

೧೯) ಎಂ. ಚಿಂದಾನಂದ ಮೂರ್ತಿ, ೧೯೬೫, ಭಾಷಾ ವಿಜ್ಞಾನದ ಮೂಲ ತತ್ವಗಳು, ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು-೦೪.

೨೦) ಸಂಪಾದಕರು, ಬಸವರಾಜ ಸಬರದ. ಸಂ:೧೯೯೭, ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೧) ಮಹಾದೇವಯ್ಯ .ಪಿ. ೨೦೦೦. 'ಸಾಮಾಜಿಕ ಉಪಭಾಷೆ'. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨) ಕೆ. ಕೆಂಪೇಗೌಡ. ೧೯೯೬. ಸಾಮಾನ್ಯ ಭಾಷಾ ವಿಜ್ಞಾನ. ಡಾ॥ ಅರವಿಂದ್ ಮಾಲಗತ್ತಿ ನಿರ್ದೇಶಕರು, ಪ್ರಸಾರಂಗ, ಮಾನಸಗಂಗೋತ್ರಿ, ಮೈಸೂರು.

೨೩) ಸಂಕ್ಷೀಪ್ತ ಕನ್ನಡ ನಿಘಂಟು (ಪರಿಷ್ಕೃತ). ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

~ * ~ * ~ * ~

